# ಅನ್ವೇಷಣೆ

ಸಂಪಾದಕ - ಆರ್.ಜಿ. ಹಳ್ಳಿ ನಾಗರಾಜ್

ಸಾಹಿತ್ಯ-ರಂಗಭೂಮಿ-ಚಿತ್ರಕಲೆ ಮಾಸಿಕ

ಸಂಚಿಕೆ 5 – 6



ಮೀನುಗಾರ್ತಿ ಕಲೆ : ಶ್ರೀಕಾಂತಶೆಟ್ಟಿ



'ಹಸಿದ ಕೈಗಳಿಗೆ
ದುಡಿವುದೆಂದರೆ ಪ್ರೀತಿ'

— ಸು. ರಂ. ಎಕ್ಕುಂಡಿ

# ಅನ್ವೇಷಣೆ

ಸಾಹಿತ್ಯ, ರಂಗಭೂಮಿ, ಚಿತ್ರಕಲೆ
ಮಾಸಿಕ

ಮುಖಪುಟ ಎಕ್ಕುಂಡಿ ಚಿತ್ರ:
ಎಂ. ಬ್ರಾಲೆಬ್

ಸಂಪಾದಕ
ಆರ್. ಜಿ. ಹಳ್ಳಿ ನಾಗರಾಜ್

ಗೌರವ ಸಂಪಾದಕ
ದೊಡ್ಡಹುಲ್ಲೂರು ರುಕ್ಕೋಜಿ

ಸಂಪುಟ - 1
ಸಂಚಿಕೆ 5-6
ಮಾರ್ಚ್ - ಏಪ್ರಿಲ್
1985



ಮುಖದ ನಗುವಿನ ಹಿಂದೆ/ನೋವುಗಳ ಗೆರೆ ಹೊತ್ತು/ಪ್ರತಿ ನಿಮಿಷ ಭಾವಗಳ ಭೂ ಕಂಪನ – ಎಂದು ಕವಿಯಾಗಿ ಮಾತನಾಡುವ ಈ ಹುಡುಗ ಜಿ. ಎಸ್. ಮೋಹನ್ : ಲಲಿತ ಕಲೆಗಳಲ್ಲಿ ವಿಶೇಷ ಆಸಕ್ತಿ. ಕಾವ್ಯದಲ್ಲಿ ಹೊಸತನ್ನು ಅನ್ವೇಷಿಸುವ ಗಂಭೀರ ಪ್ರವೃತ್ತಿ ಯುವನು. ಪ್ರಸ್ತುತ ಬೆಂ. ವಿ. ವಿ. ದ. ಸಂವಹನ (Communication) ವಿದ್ಯಾರ್ಥಿ.

ಕುಣಿವ ಕಾಲಿಗೆ ಗೆಜ್ಜೆ ಕಟ್ಟಿ ; ಎಲ್ಲೋ ಬಲಿ ತೆಗೆದುಕೊಂಡ ಗುಂಡಿಗೆ ಮಾನವೀಯ ಅನುಕಂಪ ಸೂಚಿಸುತ್ತ, ಕಾವ್ಯದ ಶಬ್ದಗಳಲ್ಲಿ ಮನಸ್ಸಿಗೆ ನಾಟುವಂತೆ ಲಯ, ಬಂಧಗಳ ಕಡೆ ವಿಶೇಷ ಗಮನ ಕೊಟ್ಟು ಓದುಗರನ್ನು ಕ್ಷಣ ಹಿಡಿದಿಡುವ ಪ್ರಯತ್ನ ಮಾಡುತ್ತಿರುವ ಮೋಹನ್, ತುಂಟತನದ, ಬೇಟೆ ಕಣ್ಣಿನ ಪ್ರೀತಿಯ ‘ ಮೋನಿ.’

ನಾಟಕ ಪದವಿ ಶಿಕ್ಷಣದಲ್ಲಿ ಇತ್ತೀಚೆಗೆ ಎರಡು ಚಿನ್ನದ ಪದಕ ಗಳಿಸಿರುವ ಈ ಹುಡುಗನಿಗೆ ‘ ಅನ್ವೇಷಣೆ ’ ಯ ಅಭಿನಂದನೆ ಸಲ್ಲುತ್ತದೆ. ಸಾಹಿತ್ಯ ಕ್ಷೇತ್ರದಲ್ಲಿ ದಾಖಲೆಯಾಗುವ ಕೆಲವು ‘ ಪುರಾವೆ ’ ಕೊಟ್ಟ ಈತ ಹಿರಿಯ ಕವಿ ಎಕ್ಕುಂಡಿಯವರ ಕಾವ್ಯಕ್ಕೆ (ನೋಡಿ : ಪುಟ 11) ಇಲ್ಲಿ ವಿಶೇಷವಾಗಿ ಮಾರುಹೋಗಿದ್ದಾನೆ. —ಸಂಪಾದಕ

# ಕಾದಂಬರಿ : ವಿಪುಲತೆಯಲ್ಲಿ ವಿರಳ ಮೌಲಿಕತೆ

'ಕಾದಂಬರಿ' ಇಂದು ಯಾರಿಗೂ ಅಪರಿಚಿತವಲ್ಲದ ಪದ. ನಮ್ಮ ಬರಹಗಾರರು ಈ ಪ್ರಕಾರವನ್ನು ಹರಿಬರಿ ಘಟನೆಗಳನ್ನು ಹೆಣೆದ ಸಿದ್ಧಸೂತ್ರಗಳ ರಮಣೀಯತೆಯ ಕೂಪಕ್ಕೆ ದಬ್ಬಿ, ಈ ಪ್ರಕಾರದ ಸಾಹಿತ್ಯಿಕ ಮೌಲ್ಯಕ್ಕೆ ತಂದೊಡ್ಡಿರುವ ಕುತ್ತು ಇವತ್ತು ನಮ್ಮ ಓದುಗರು, ಬರಹಗಾರರು ಕ್ಷಣ ನಿಂತು ಆಲೋಚಿಸಬೇಕಾದಷ್ಟು ಆತಂಕಕಾರಿಯಾಗಿದೆ.

ಸುಮಾರು ಒಂದೂವರೆ ಸಾವಿರ ವರ್ಷಗಳಷ್ಟು ದೀರ್ಘ ಇತಿಹಾಸವಿರುವ ಕನ್ನಡ ಸಾಹಿತ್ಯ ೧೮೧೭ರಲ್ಲಿ ಆರಂಭಗೊಂಡ ಮುದ್ರಣಯುಗದಿಂದೀಚೆಗೆ ಸುಮಾರು ಲಕ್ಷಕ್ಕೂ ಮಿಕ್ಕಿ ಗ್ರಂಥಗಳನ್ನು ಕಂಡಿದೆ. ಇಷ್ಟೇ ಎಂದು ನಿಖರವಾಗಿ ಹೇಳಲಾಗದಿದ್ದರೂ ಇದರಲ್ಲಿ ಕಾದಂಬರಿಗಳ ಸಂಖ್ಯೆಯದೂ ಸಿಂಹಪಾಲು. ೪೦೦ ಕಾದಂಬರಿಗಳಿಗೂ ಹೆಚ್ಚು ಬರೆದಿರುವ ಎನ್. ನರಸಿಂಹಯ್ಯನವರಿಂದ ಹಿಡಿದು ಎರಡೇ ಕಾದಂಬರಿಗಳನ್ನು ಬರೆದಿರುವ ಕುವೆಂಪುರವರವರೆಗೆ ಸಾಹಿತ್ಯದಲ್ಲಿ ಕಾದಂಬರಿಗಳ ಸಂಖ್ಯೆ ಗಣನೀಯ.

ಸರ್ಕಾರದ ಯಾವುದೇ ಸಹಾಯ ಧನವಿಲ್ಲದಿದ್ದರೂ, ಮುದ್ರಣವೆಚ್ಚ ರಾಕ್ಷಸಾಕಾರವಾಗಿದ್ದರೂ ನಮ್ಮ ಬರಹಗಾರರಲ್ಲಿ ಪ್ರಕಟಣೆಯ ಆವೇಶ ಕುಗ್ಗಿಲ್ಲ. ಅದರಲ್ಲೂ ಧಾರಾವಾಹಿಯ ಕಲ್ಪನೆಯಿಟ್ಟುಕೊಂಡೇ ಕಾದಂಬರಿ ಕಟ್ಟುವ ಲೇಖಕರೆ ನಮ್ಮಲ್ಲಿ ಬಹಳ!

ಸರಳಗದ್ಯಕ್ಕೆ ತತ್ತಿಯೊಡೆದುಕೊಟ್ಟ ಕೆಂಪುನಾರಾಯಣನ 'ಮುದ್ರಾಮಂಜೂಷ' ದಿಂದ ಆರಂಭವಾದ ಕನ್ನಡ ಕಾದಂಬರಿಯ ಶಿಶು ಎಂ. ಎಸ್. ಪುಟ್ಟಣ್ಣನವರ 'ಮಾಡಿದ್ದುಣ್ಣೋ ಮಾರಾಯ'ದಲ್ಲಿ ಮೊದಲ ಹೆಜ್ಜೆ ಊರಿತು. ನಂತರ, ಜೀತೋಹಾರಿ ನಿಗೂಢ ಜಗತ್ತನ್ನು ಅಭ್ಯಸಿಸಿದ ತೇಜಸ್ವಿಯವರ 'ಕರ್ವಾಲೊ', ನಂಬಿಕೆಯನ್ನೇ ಕೊಂದುಣ್ಣುವ, ಸುಪ್ತಪ್ರಜ್ಞೆಯ ಮೃಗೀಯತೆಯನ್ನು ಭಾಷೆಯಲ್ಲಿ ಹಿಡಿದ ಚಿತ್ತಾಲರ 'ಶಿಕಾರಿ', ಹರೆಯದ ಹೃದಯಗಳು ಅನುಭವಿಸುವ ಅಮರ ತೀವ್ರತೆಯ ದೇಸಾಯಿಯವರ 'ಮುಕ್ತಿ', ಕಾರ್ಗತ್ತಲ ಹಗೇವಿನಲ್ಲಿ ಎಲ್ಲರಿಗೂ ಆಹಾರವಾದ ಹೆಣ್ಣಿನ ರಾವಬಹಾದ್ದೂರರ 'ಗ್ರಾಮಾಯಣ', ತೃಪ್ತಿಯ ಕಾರಣವನ್ನು ಮಣ್ಣಲ್ಲಿ ಹುಗಿದ ಶಿವರಾಮಕಾರಂತರ 'ಮರಳಿಮಣ್ಣಿಗೆ', ಸರ್ವಸಮಾನತೆಯನ್ನು ಸಾರುವ ಸಂವಿಧಾನದ ಅಸಮಾನತೆ, ಹಗಲುಮೋಸವನ್ನು ದಾಖಲಿಸುವ ಬರಗೂರರ 'ಒಂದು ಊರಿನ ಕಥೆ', ದೇವನೂರರ 'ಒಡಲಾಳ'– ಕಾದಂಬರಿಗಳಂತೆ ಜೀವಜಗತ್ತಿನ ಬಹುಮುಖ ಬದುಕನ್ನು ತುಂಬಿಕೊಂಡ ಕಾದಂಬರಿಗಳು ನಮ್ಮಲ್ಲಿ ಕೇವಲ ಬೆರಳೆಣಿಕೆಯಷ್ಟು.

ತನ್ನಲ್ಲಿ ಏನೆಲ್ಲವನ್ನೂ ಒಳಗೊಳ್ಳಬಹುದಾದ ಈ ಪ್ರಕಾರ ಸದ್ಯಕ್ಕೆ ಮಸಾಲೆ, ಕಾಮುಕತೆ, ಸಂಚಿತ ಆಶಯಗಳ ಮೇಲ್ಪದರಗಳ ಗ್ರಹಿಕೆಯನ್ನೇ ಹೊತ್ತು ಅಂಗಡಿಗಳನ್ನಲಂಕರಿಸುತ್ತಿರುವುದು ಅತ್ಯಂತ ವ್ಯಸನದ ಸಂಗತಿಯಾಗಿದೆ.

—ಗೌರವ ಸಂಪಾದಕ

# ಹಿಂದಿನ ಸ್ಥಳನಾಮಗಳ ರಕ್ಷಣೆ: ಎಸ್. ಎಲ್. ಭೈರಪ್ಪ ಅವರ ನಿಲುವು ತರ್ಕಬದ್ಧ

ಈ ಚಿಕ್ಕ ಲೇಖನಕ್ಕೆ ಮೂಲಪ್ರಚೋದನೆ ಅರುಂಧತೀಜ ಅವರು 'ಸಾಹಿತಿ – ಸಾಹಿತ್ಯ: ಸುದ್ದಿ' ಎಂಬ ಶೀರ್ಷಿಕೆಯ ಕೆಳಗೆ ಬರೆದ ಒಂದು ಟಿಪ್ಪಣಿಯ ಉತ್ತರಾರ್ಧ ('ಅನ್ವೇಷಣೆ'– ಡಿಸೆಂಬರ್, 1984. ಪು. 52). ಮೈಸೂರಿನ ತೊಣಚಿಕೊಪ್ಪಲು ಬಡಾವಣೆಗೆ 'ಕುವೆಂಪು ಬಡಾವಣೆ' ಎಂದು ಮೈಸೂರುನಗರ ಪಾಲಿಕೆಯು ನಾಮಕರಣ ಮಾಡಿದಾಗ ಹಲವು ಬ್ರಾಹ್ಮಣರಿಗೆ ಅದು ಅಸಮಾಧಾನವನ್ನುಂಟು ಮಾಡಿತೆಂದೂ ಅದರಲ್ಲಿ ಎಸ್. ಎಲ್. ಭೈರಪ್ಪನವರು ಒಬ್ಬರೆಂದೂ ಅವರೆಲ್ಲರಿಗೆ ಕುವೆಂಪು ಅವರನ್ನು ಕಂಡರೆ 'ಶೂದ್ರ ಕವಿ' ಎಂಬ ಅಸಾದರವೆಂದೂ ಅರುಂಧತೀಜ ಅವರು ಬರೆದು, ಭೈರಪ್ಪನವರ 'ತರಂಗ' ಪತ್ರಿಕೆಯಲ್ಲಿ ಪ್ರಕಟವಾದ ವಿಳಾಸವನ್ನೂ, ಅವರ ಮನೆಯ ಮುಂದಿನ ನಾಮಫಲಕವನ್ನು ಆಧಾರವಾಗಿ ಉಲ್ಲೇಖಿಸಿದ್ದಾರೆ: ಎರಡು ಕಡೆಯೂ ಅವರ ವಿಳಾಸದಲ್ಲಿ ತೊಣಚಿಕೊಪ್ಪಲು ಬಡಾವಣೆ ಎಂದೇ ಇದೆಯಂತೆ.

ಈ ಮಾತುಗಳ ಸತ್ಯಾಸತ್ಯತೆಯನ್ನು ತಿಳಿಯಲು ಭೈರಪ್ಪನವರಿಗೇ ನೇರವಾಗಿ ಪತ್ರ ಬರೆದಾಗ ಅವರಿಂದ ನನಗೆ ಬಂದ ಉತ್ತರದಲ್ಲಿ ಕೆಲವು ಅಂಶಗಳನ್ನು ಸ್ಪಷ್ಟಪಡಿಸಿದರು. ಅವರಿಗೆ ಮನೆಯ ನಿವೇಶನ ದೊರೆತಾಗ ತೊಣಚಿಕೊಪ್ಪಲು ಬಡಾವಣೆ ಎಂಬ ಹೆಸರಿದ್ದು; ಮನೆ ಕಟ್ಟಿ ಮುಗಿಸುವ ಹೊತ್ತಿಗೆ ಅದಕ್ಕೆ ಸಂಜಯನಗರವೆಂದು ನಾಮಕರಣ ಮಾಡಲು ಹಲವರು ಯತ್ನಿಸಿದಾಗ ಅವರು ಅದನ್ನು ಪ್ರತಿಭಟಿಸಿದರು. ಅವರ ಪ್ರತಿಭಟನೆಯು ವ್ಯರ್ಥವಾದಾಗ, ಸಂಜಯನಗರವೆಂದು ನಾಮಕರಣ ಸದ್ಯದಲ್ಲಿ ಆಗಿಯೇ ಆಗುತ್ತದೆ ಎಂದು ತಿಳಿದಿದ್ದರೂ ಅವರು ತಮ್ಮ ಮನೆಯ ಮುಂದಿನ ನಾಮಫಲಕದಲ್ಲಿ ತೊಣಚಿಕೊಪ್ಪಲು ಬಡಾವಣೆ ಎಂದೇ ಕೆತ್ತಿಸಿದರು. ಅದಕ್ಕೆ ಕಾರಣ: ಆ ನಿವೇಶನಗಳೆಲ್ಲ ತೊಣಚಿಕೊಪ್ಪಲು ಊರಿಗೆ ಸೇರಿದ ಹೊಲಗಳು ಮತ್ತು ಸಂಜಯ ಗಾಂಧಿಗೂ ಆ ಜಾಗಕ್ಕೂ ಏನೂ ಸಂಬಂಧವಿರಲಿಲ್ಲ. ಮುಂದೆ, ರಾಜಕೀಯದಲ್ಲಿ ಬದಲಾವಣೆಯಾಗಿ ಸಂಜಯಗಾಂಧಿಯ ಹೆಸರು ಹಿನ್ನೆಲೆಗೆ ಸರಿದು, ಆತನ ಹೆಸರನ್ನು, ಬಡಾವಣೆಗೆ ಇಡುವ ಯತ್ನವೂ ನಿಂತುಹೋದಾಗ, ಕೆಲವರು ಅದಕ್ಕೆ ವಿಕಾಸನಗರ ಎಂದು ಹೆಸರಿಡುವ ಯತ್ನವನ್ನೂ ಮಾಡಿದರು. ಜನತಾ ಸರ್ಕಾರ ಬಂದ ಬಳಿಕ,

ಸಂಜಯಗಾಂಧಿ ಬದಲು ಕುವೆಂಪುನಗರವೆಂದು ನಾಮಕರಣ ಮಾಡಲು ನಗರಪಾಲಿಕೆ ಮುಂದಾದಾಗ "ಸಂಜಯನ ಬದಲಿಗೆ ಕುವೆಂಪು ಅವರ ಹೆಸರನ್ನು ಸ್ವಾಗತಿಸಿದವರಲ್ಲಿ" ಅವರೊಬ್ಬರು. ಭೈರಪ್ಪನವರ ಒಲವು ಒಂದು ಹಳ್ಳಿಯ ಮೂಲ ಹೆಸರನ್ನು ಉಳಿಸಿ ಉಳಿಸಿಕೊಳ್ಳುವುದರತ್ತ: ಅದನ್ನು ಬದಲಾಯಿಸಬೇಕಿದ್ದರೆ "ಕುವೆಂಪುನಗರವೆಂಬುದು ಹೆಚ್ಚು ಸಮರ್ಪಕ". ಕುವೆಂಪುನಗರವೆಂದು ನಾಮಕರಣವಾದ ಮೇಲೆ ಮನೆಯ ಮುಂಭಾಗದ ಕಲ್ಲನ್ನು ಕೀಳಿಸಿ ಮತ್ತೆ ಬರೆಸುವ ಗೋಜಿಗೆ ಹೋಗದಿದ್ದುದರಿಂದ ಹೆಸರು ಹಾಗೇ ಉಳಿಯಿತು. ಮತ್ತು ಅವರ ಹೆಸರನ್ನು ಅಚ್ಚು ಮಾಡಿಸಿದ "ಲೆಟರ್ ಹೆಡ್" ಸಿದ್ಧವಾದಾಗ ತೊಣಚಿಕೊಪ್ಪಲು ಬಡಾವಣೆ ಎಂದೇ ಇದ್ದು ಅದರ ಹಾಳೆಯಲ್ಲಿ ಪತ್ರ ಬರೆದುದರಿಂದ 'ತರಂಗ'ದವರು ಅದನ್ನೇ ಅಚ್ಚು ಮಾಡಿದರು. ಅವರ "ಪರ್ವ" ಕಾದಂಬರಿಯ ಹಿಂದಿ ಅನುವಾದದಲ್ಲಿ (ಪ್ರ: ಶಬ್ದಾಕರ್, ನವದೆಹಲಿ) ಕುವೆಂಪುನಗರ ಎಂಬ ವಿಳಾಸವನ್ನೇ ಅವರು ಕೊಟ್ಟಿದ್ದಾರೆ. ಹಳೆಯ ಲೆಟರ್‌ಹೆಡ್ ಹಾಳೆಗಳೆಲ್ಲ ಮುಗಿದು ಹೊಸದಾಗಿ "ಲೆಟರ್ ಹೆಡ್" ಮಾಡಿಸುವಾಗ ಸಹಜವಾಗಿಯೇ ಕುವೆಂಪುನಗರ ಎಂದು ಅಚ್ಚು ಮಾಡಿಸಲಿದ್ದಾರೆ. "ತೊಣಚಿ ಕೊಪ್ಪಲು" ಹೆಸರಲ್ಲಿ ಬ್ರಾಹ್ಮಣ್ಯವಾದರೂ ಎಲ್ಲಿದೆ ಎಂಬುದು ಅವರ ಪ್ರಶ್ನೆ.

ಮೇಲಿನ ಮಾತುಗಳು ಭೈರಪ್ಪನವರ ನಿಲುವು ಏನೆಂಬುದನ್ನು ಸ್ಪಷ್ಟಪಡಿಸುತ್ತವೆ. ನಾನು ಅರುಂಧ ತೀಜರನ್ನು ಈ ವಿಷಯದಲ್ಲಿ ಟೀಕಿಸುತ್ತಿಲ್ಲ. ಅವರ ಗಮನಕ್ಕೆ ವಾಸ್ತವವೇನೆಂಬುದನ್ನು ತರುತ್ತಿದ್ದೇನೆ, ಅಷ್ಟೇ. ತಪ್ಪು ತಿಳವಳಿಕೆಗಳು ವಾತಾವರಣವನ್ನು ಹದಗೆಡಿಸಬಾರದು ಎಂಬುದಷ್ಟೇ ನನ್ನ ಕಳಕಳಿ. ಮೇಲಿನ ಶೂದ್ರ-ಬ್ರಾಹ್ಮಣ ಮಾತುಗಳು ಮೈಸೂರಲ್ಲಿ ಮತ್ತು ಬೆಂಗಳೂರಲ್ಲಿ ಕೆಲವು ಜವಾಬ್ದಾರಿಯುತ ಸಾಹಿತಿಗಳ ಬಾಯಿಂದ ಕೇಳಿ ಬಂದಿದ್ದರೂ, 'ಅನ್ವೇಷಣೆ'ಯ ಲೇಖನವು ವಾಸ್ತವವನ್ನು ಅರಿಯಲು ಪ್ರಚೋದನೆ ನೀಡಿತು ಎಂಬುದನ್ನು ಮತ್ತೊಮ್ಮೆ ನೆನಪಿಸುತ್ತಿದ್ದೇನೆ.

ಕುವೆಂಪು ನಮ್ಮ ಹೆಮ್ಮೆಯ ಕವಿ. ಅವರ ಹೆಸರನ್ನು ಈಗ ಒಂದು ಬಡಾವಣೆಗೆ ಇಟ್ಟು ಮೈಸೂರು ನಗರ ಪಾಲಿಕೆ ತನ್ನ ಗೌರವವನ್ನು ಸಲ್ಲಿಸಿದೆ. "ತೊಣಚಿ ಕೊಪ್ಪಲು ಬಡಾವಣೆ" ಎಂಬ ಹೆಸರನ್ನು ತಪ್ಪಿಸಿಯೇ ಆ ಹೆಸರನ್ನು ಇಡಬೇಕಿತ್ತೇ? ಎಂಬ ಪ್ರಶ್ನೆ ನನ್ನದು. ಅವರು ವಾಸವಿರುವ ಮನೆಯ ಮುಂಭಾಗದಲ್ಲೇ ಇರುವ ಯಾದವಗಿರಿಗೋ, ಜಯಲಕ್ಷ್ಮೀಪುರಂ ಬಡಾವಣೆಗೋ (ಇವು ಈಚಿನ ಹೆಸರುಗಳು) ಇಡಬಹುದಿತ್ತಲ್ಲವೇ? ಅರಸೊತ್ತಿಗೆ ಹೋದಮೇಲೂ ಅದರ ವಾಸನೆ ಹೇಗೆ ಅಂಟಿಕೊಂಡಿರುತ್ತದೆಯೆಂಬುದಕ್ಕೆ ಜಯಲಕ್ಷ್ಮೀಪುರ ಹೆಸರೇ ಸಾಕ್ಷಿ. ಅಥವಾ ಯಾವುದಾದರೂ ಹೊಸ ದೊಡ್ಡ ಬಡಾವಣೆಗೆ ಕುವೆಂಪು ಹೆಸರನ್ನು ಇಡಬಹುದಿತ್ತು. ನನ್ನ ಕೊರಗು ಏನೆಂದರೆ, ನಮ್ಮ ಹಳೆಯ ಅಚ್ಚಗನ್ನಡದ ಹೆಸರುಗಳು ಹೋಗುತ್ತಿವೆ.

ತೊಣಚಿಕೊಪ್ಪಲು ಎಂಬ ಹೆಸರಿನ ಅರ್ಥವೇನೋ ತಿಳಿಯದು. ದನಕರುಗಳಿಗೆ ಹತ್ತುವ ನೊಣವನ್ನು ಹೇಳುವ ಪದ ಅಲ್ಲಿಲ್ಲ. ಸ್ಥಳ ನಾಮಗಳ ಸ್ವರೂಪವನ್ನು ತಿಳಿದವರಿಗೆ ಅಲ್ಲಿ ತುಳಸಿಯಂತಹ ಸಸ್ಯವನ್ನು ಹೇಳುವ ಪದವಿರಬಹುದೆಂದು ಅನ್ನಿಸುತ್ತದೆ. ಅದು ಏನೇ ಇರಲಿ, ಹಳೆಯ ಸ್ಥಳನಾಮಗಳ ರಕ್ಷಣೆ ಆಗಬೇಕೆನ್ನುವ ನನ್ನ ಹಂಬಲವನ್ನು ಈಗಾಗಲೇ ಹಲವು ಲೇಖನಗಳಲ್ಲಿ ಹೇಳಿಕೊಂಡಿದ್ದೇನೆ. ಉದಾ : ಸೂಳೆಕೆರೆ ಎಂಬ ಹೆಸರು ಹೋಗಿ ಶಾಂತಿಸಾಗರ ಆಗಿದೆ; ಬೆಂಗಳೂರಲ್ಲಿ ಕೆಂಚೇನಹಳ್ಳಿಯು ರಾಜೇಶ್ವರಿನಗರ ಆಗಿದೆ. ದೊಮ್ಮಲೂರು ಹೋಗಿ ಭಗತ್‌ಸಿಂಗ್‌ನಗರ ಆಯ್ತು ; ಆದರೆ ಆ ಊರಿನ ಜನ ಹಠತೊಟ್ಟು ಹೋರಾಡಿ ಆ ಹೊಸ ಹೆಸರನ್ನು ತಪ್ಪಿಸಿ ಹಳೆಯ ಹೆಸರನ್ನು ಉಳಿಸಿಕೊಂಡರು. ಆದರೆ ಈ ಹಳೆಯ ಹೆಸರುಗಳನ್ನು ತೆಗೆದು ಹೊಸ ಹೆಸರುಗಳನ್ನಿಡುವ ಪರಿಪಾಠ ಮುಂದುವರಿದರೆ, ನಗರಗಳ ಪಕ್ಕದ ಹಳ್ಳಿಗಳ ಹೆಸರುಗಳೆಲ್ಲ ಮಾಯವಾಗುತ್ತ ಹೋಗುತ್ತವೆ. ದೂರದ ಹಳ್ಳಿಗಳ ಜನರೂ ತಮಗೆ ಆಕರ್ಷಕವಾದ ಹೆಸರನ್ನು ಇಟ್ಟುಕೊಳ್ಳಲು ಆರಂಭಿಸಬಹುದು. ಈ ವಿಷಯದಲ್ಲಿ ಕಳಕಳಿ ಇರುವವರು ತಮ್ಮ ಅಭಿಪ್ರಾಯಗಳನ್ನು ಹಲವು ಕಡೆ ಹೇಳಿ ಜನರಲ್ಲಿ ಒಂದು ಅರಿವನ್ನು ಮೂಡಿಸಲು ಯತ್ನಿಸಬಹುದು. ತಮಿಳುನಾಡಿನಲ್ಲಿ ಹಳೆಯ ಹೆಸರುಗಳ ಪುನಸ್ಥಾಪನೆ ನಡೆಯುತ್ತಿದೆಯೆಂಬುದನ್ನು ಇಲ್ಲಿ ನಾವು ಜ್ಞಾಪಿಸಿಕೊಳ್ಳಬೇಕು. ಒಂದು ಊರಿಗೆ ಹೆಸರು ಯಾವುದೋ ಕಾರಣದಿಂದ ಸಹಜವಾಗಿ ಒದಗಿರುತ್ತದೆ. ಅದನ್ನು ಬದಲಿಸಲು ನಮಗೆ ಹಕ್ಕೂ ಇಲ್ಲ, ಬದಲಿಸಲೂ ಬಾರದು.

ಈ ಹಿನ್ನೆಲೆಯಲ್ಲಿ ನನಗೆ ಡಾ. ಎಸ್. ಎಲ್. ಭೈರಪ್ಪನವರ ನಿಲುವು ತರ್ಕಬದ್ಧವಾಗಿದೆಯೆಂದು ಅನ್ನಿಸಿತು. ಹೆಸರುಗಳನ್ನು ಕುರಿತಂತೆಯೇ ಪ್ರತ್ಯೇಕವಾಗಿ, ಇನ್ನೂ ವಿಸ್ತಾರವಾಗಿ ಬರೆಯಲು ಸಾಧ್ಯ : ಆದರೆ ಇಲ್ಲಿ ಅದಕ್ಕೆ ಅವಕಾಶವಿಲ್ಲ. ✶

---

ಪ್ರಿಯರೆ,

'ಅನ್ವೇಷಣೆ'ಯಲ್ಲಿ ಪ್ರಕಟವಾಗುವ ಯಾವುದೇ ಬರಹಕ್ಕೂ ಮುಕ್ತ ಚರ್ಚೆಯ ಅವಕಾಶವಿದೆ. ಲೇಖನಕ್ಕೆ ಪೂರಕವಾದ ಇಲ್ಲವೇ ಆಕ್ಷೇಪಣೆಯ ವಿಚಾರಗಳಿದ್ದರೆ ಪತ್ರಿಕೆ ತಲುಪಿದ ಹದಿನೈದು ದಿನಗಳ ಒಳಗೆ ನಿಮ್ಮ ಅಭಿಪ್ರಾಯಗಳನ್ನು ನಮಗೆ ತಲುಪುವಂತೆ ಕಳುಹಿಸಿಕೊಡಿ.

—ಸಂ.

---

ವೈಜ್ಞಾನಿಕ ಕತೆ : —ಪ್ರೊ|| ಸಂಜೀವ ದೇಶಪಾಂಡೆ

# ಸಾವು, ಸಾಪೇಕ್ಷತಾವಾದ ಮತ್ತು ನಾನು

'ರೋಹಿಣಿ ಉಪಗ್ರಹವನ್ನು ಯಶಸ್ವಿಯಾಗಿ ಕಕ್ಷೆಗೆ ಹಾರಿಸುವ ಮೂಲಕ ಭಾರತ ಬಾಹ್ಯಾಕಾಶ ಸಂಶೋಧನೆಯು ಮಹತ್ವದ ಮಜಲನ್ನು ದಾಟಿದಂತಾಯಿತು.' (ದಿ: 18-4-1983 ರ ದಿನ ಪತ್ರಿಕೆಯೊಂದರ ವರದಿ)

**ಕ್ರಿ. ಶ. 2000**

ರೋಹಿಣಿ ಉಪಗ್ರಹವನ್ನು ಯಶಸ್ವಿಯಾಗಿ ಹಾರಿಸಿ ಭಾರತ ಬಾಹ್ಯಾಕಾಶ ಸಂಶೋಧನೆಯಲ್ಲಿ ವಿಶೇಷತೆಯನ್ನು ಗಳಿಸಿಕೊಂಡ ಹದಿನೇಳು ವರುಷಗಳ ಅವಧಿಯಲ್ಲಿ ನಾನು ಕಲ್ಪಿಸಿಕೊಂಡ ತತ್ವಗಳು, ಮೌಲ್ಯಗಳು, ವಿಚಾರ ವಿಮರ್ಶೆಗಳು ಈ ಶತಮಾನದ ಮೂಸೆಯಲ್ಲಿ ಸಾರ್ವಕಾಲಿಕ ಮೌಲ್ಯಗಳಾಗಿ ಆವಿರ್ಭವಿಸುತ್ತವೋ ಇಲ್ಲವೋ ಎಂಬುದು ನನ್ನ ಕಳವಳಕ್ಕೆ ಕಾರಣವಾಗಿವೆ. ಈ ಅವಧಿಯಲ್ಲಿ ನನ್ನ ಮಾನಸಿಕ ಬೆಳವಣಿಗೆ ತನ್ನ ವಯಸ್ಸಿನ ಬೆಳವಣಿಗೆಯಲ್ಲಿ ತಾದಾತ್ಮ್ಯ ಹೊಂದುತ್ತ ನಡೆದುದರ ಮೂಲಕವೇ ಈ ರೀತಿಯ ಕಳವಳಕ್ಕೆ ಕಾರಣವಾಗಿರಬಹುದು. ಈಗಿನ ಸಾಮಾಜಿಕ ಹಿನ್ನೆಲೆಯಾಗಲಿ, ವೈಜ್ಞಾನಿಕ ಆವಿಷ್ಕಾರಗಳಾಗಲಿ ತಮ್ಮ ಮೌಲಿಕ ಧೋರಣೆಗಳಲ್ಲಿ ಪ್ರಗಲ್ಭ ಬದಲಾವಣೆ ಕಂಡುಕೊಂಡ ಸಂದರ್ಭದಲ್ಲಿ ನಾನು ಅತ್ಯಂತ ಪರಿಶ್ರಮದಿಂದ ಕಂಡುಕೊಂಡ ಸಾರ್ವಕಾಲಿಕ ಮೌಲ್ಯಗಳು ಮೂಢನಂಬಿಕೆಗಳಾಗಿ ತೋರಬಹುದೆಂಬ ಭೀತಿ ನನ್ನನ್ನಾವರಿಸಿದೆ. ಸಾಮಾಜಿಕ ಮೌಲ್ಯಗಳಿಗೆ ಹಾಗೂ ವೈಜ್ಞಾನಿಕ ಆವಿಷ್ಕಾರಗಳಿಗೆ ವಿಶೇಷವಾಗಿ ತಳಹದಿಯಾಗಿ ನಿಂತಿರುವ ತತ್ವಶಾಸ್ತ್ರದ ಮನೋದೌರ್ಬಲ್ಯ ಕಂಡು ನಾನು ರೋಸಿ ಹೋಗಿದ್ದೇನೆ. ಸರ್ವಕಾಲೀನತೆಯ ಮಹತ್ವವನ್ನು ಸಾಂಪ್ರದಾಯಿಕತೆಯಲ್ಲಿ ಒಳಗೊಳ್ಳುವ ಮೂರ್ಖ ಪರಂಪರೆಯನ್ನು ನನ್ನ ಆತ್ಮಹತ್ಯೆಯ ಮೂಲಕ ಕೊನೆಗಾಣಿಸಬೇಕೆಂಬ ಇಚ್ಛೆ ಮೂಡುತ್ತದೆ.

**ಮೇ 18,2000**

ಇಂದು ನನ್ನ ಹುಟ್ಟುಹಬ್ಬ. ಸಾಯುವ ಅಂತಿಮ ಕ್ಷಣ ಬಂದೆರಗುವವರೆಗೆ ನಾನು ಯಾವಾಗಲೂ ಹುಟ್ಟಿದ್ದೇನೆ. ನಂತರ ಯಾವಾಗಲೂ ಸಾಯಬಹುದು. ಬದುಕಿನ ವಿಪರ್ಯಾಸಕ್ಕೆ ಸಾವೊಂದು ದೃಷ್ಟಾಂತ. ಸಾವಿನಲ್ಲಿಯೇ ಎಲ್ಲ ಬದುಕು ಅಂತ್ಯಗೊಳ್ಳಬೇಕೆಂಬ ನಿಲುವು ಹಾಸ್ಯಾಸ್ಪದ.

ಬದುಕು ಅಂತಿಮ ಕ್ಷಣಗಳನ್ನು ಕಾಣಬೇಕೇ ? ನನ್ನ ಮನದಾಳದಲ್ಲಿ ಸದಾ ಕೊರೆಯುತ್ತಿರುವ ಈ ವಿಷಯ ನನ್ನ ಮನಸ್ವಾಸ್ಥ್ಯವನ್ನು ಕಸಿದುಕೊಂಡಿದೆ. ನಾನೇನೂ

ಸಾಯಲು ಅಂಜುವವನಲ್ಲ. ಆದರೆ ಸಾವಿನಾಚೆಯ ಪ್ರಪಂಚದ ಬಗ್ಗೆ ಕೌತುಕ ಉಂಟಾದಾಗಿಂದ ‘ಸಾವು’ ನನ್ನನ್ನು ತೀಕ್ಷ್ಣವಾಗಿ ಕಾಡತೊಡಗಿದೆ. ಸಾವಿನ ಸಂದರ್ಭದಲ್ಲಿ ವಾಸ್ತವಿಕ ಪ್ರಪಂಚದಿಂದ ಅವಾಸ್ತವಿಕ, ಅಂದರೆ ಸಾವಿನಾಚೆಯ ಪ್ರಪಂಚಕ್ಕೆ ಹೋದರೆ ಅದೊಂದು ‘ಸಾವು’ ಆಗಬಲ್ಲದೆ ? ಈ ಸಾವು ಅಷ್ಟೊಂದು ನಿಗೂಢವೆ ? ಸಾವು ಅಷ್ಟೊಂದು ವಿಸ್ಮಯಕಾರಿಯೆ ? ಈ ಸಾವು ನನ್ನನ್ನು ಕೃಶ ನನ್ನಾಗಿ ಮಾಡಿಬಿಡುತ್ತಿದೆ. ಭಯ ನನ್ಮನದಲ್ಲಿ ಆವರಿಸುತ್ತಿದೆ. ವಿಚಾರಭೂತ ದಿಂದ ಪಾರಾಗಲು ಸಾಧ್ಯವಿಲ್ಲವೆ ?

**ಹಲವು ಟಿಪ್ಪಣಿಗಳು :**

ಹುಟ್ಟು ಮತ್ತು ಸಾವು ಒಂದಕ್ಕೊಂದು ಪೂರಕ. ಸಾವಿನಲ್ಲಿಯೇ ಹುಟ್ಟು ; ಹುಟ್ಟಿ ನಲ್ಲಿಯೇ ಸಾವು. ಹುಟ್ಟಿಲ್ಲದೆ ಸಾವಿಲ್ಲ ; ಸಾವಿಲ್ಲದೇ ಹುಟ್ಟಿಲ್ಲ. ಒಂದಕ್ಕೊಂದು ಸಾಪೇಕ್ಷ. ವೃತ್ತದ ಪರಿಧಿಯಲ್ಲಿ ಪರಿಭ್ರಮಿಸುತ್ತಿರುವ ಜೀವಾತ್ಮಗಳು. ಕೇಂದ್ರದ ಅಭಿಮುಖ ಹುಟ್ಟು ; ವಿರೋಧ ಸಾವು.

ಹುಟ್ಟು ತನ್ನ ನಿಶ್ಚಿತವಾದ ಸ್ಥಾನ ಕಲ್ಪಿಸಿಕೊಂಡಂತೆ ಸಾವು ಕೂಡ ನಿಶ್ಚಿತವಾದ ಸ್ಥಾನ ಕಲ್ಪಿಸಿಕೊಂಡಿದೆ. ವಿಶಾಲ ಬ್ರಹ್ಮಾಂಡದಲ್ಲಿ ಸೂರ್ಯನೊಬ್ಬ ಅತ್ಯಂತ ನಿಕೃಷ್ಟ. ಸಾವಿನ ನಿಶ್ಚಿತ ಸ್ಥಾನ ವಿಶಾಲ ಬ್ರಹ್ಮಾಂಡದಲ್ಲಿ ಎಲ್ಲೋ ಅಡಗಿರಬಹುದು. ಜೀವಾತ್ಮ ಗಳಿಗೆ ಎಲ್ಲಿ ಬೇಕೆಂದಲ್ಲಿ ಸ್ವಚ್ಛಂದವಾಗಿ ತೇಲುವ ಸ್ವಾತಂತ್ರ್ಯ ಉಂಟು ; ಗಗನ ಯಾತ್ರಿಗಳು ಅಂತರಿಕ್ಷದಲ್ಲಿ ನಡೆದಾಡುವಂತೆ. ಎಲ್ಲಿಯೋ ಹೋಗಿ ಮುಟ್ಟಬಹುದು ; ಎಲ್ಲಿಯೋ ಹೋಗಿ ಜೀವಿಸಬಹುದು. ಆದರೂ ಅವಕ್ಕೆ ನಿಶ್ಚಿತವಾದ ಗುರಿ ಇದೆ, ಮರಳುವ ತವಕ ಇದೆ.

**ಸಂಕ್ಷಿಪ್ತ ವಿಚಾರ ವಿಮರ್ಶೆ**

ಐನ್‌ಸ್ಟೈನ್‌ನ ಸಾಪೇಕ್ಷತಾವಾದದ ಪ್ರಕಾರ, ಒಂದು ವಸ್ತುವಿನ ಚಲಿಸುವ ವೇಗ ಹೆಚ್ಚಿದಂತೆಲ್ಲಾ ಅದರ ಬೆಳವಣಿಗೆ ಕಡಿಮೆಯಾಗುತ್ತ ಹೋಗುವದು. ಕಾಲ ಪ್ರವಾಹವೊಂದು ಸಾಪೇಕ್ಷ. ಕಾಲಪ್ರವಾಹದ ವೇಗದಲ್ಲೇ ಹೋದರೆ ಅದನ್ನೇ ಸ್ಥಗಿತ ಗೊಳಿಸಬಹುದು.

ಹುಟ್ಟು–ಸಾವು ಅನಿವಾರ್ಯವಾಗಿರುವದರಿಂದ ಹಾಗೂ ಕರ್ಮಸಿದ್ಧಾಂತದ ಪ್ರಕಾರ ಹುಟ್ಟು–ಸಾವುಗಳು ನಿರಂತರ ಸಂಭವಿಸುತ್ತಲೇ ಇರುವುದರಿಂದ ಸಾವು–ಬದುಕಿನ ಪ್ರಪಂಚ ವಿರೋಧಾತ್ಮಕವಾಗಿ ಕಂಡರೂ ಅವು ಒಂದೇ. ಆದರೂ ಸಾವಿನಲ್ಲಿರುವ ನಿಗೂಢತೆ, ಅಗಾಧತೆ, ವಿಸ್ಮಯತೆ, ರಹಸ್ಯತೆ ಬದುಕಿನಲ್ಲಿಲ್ಲ. ದಿನವೂ ಸಾವು ಬಾಳಿ ಬದುಕುವ, ಬದುಕು ರಹಸ್ಯಮಯವಾಗದೇ ಇರುವುದಕ್ಕೆ ಕಾರಣ ನಾವೇ ಬದುಕಾಗಿರ ಬಹುದು.

ಕರ್ಮಸಿದ್ಧಾಂತದಲ್ಲಿ ಹುಟ್ಟು-ಸಾವುಗಳಿಗೆ ವಿಶಿಷ್ಟ ಕರ್ಮ ಪ್ರಾಪ್ತವಾಗಿದ್ದರಿಂದ ಸಾವಿನಾಚೆಯ ಬದುಕು ಜೀವಿತಾವಧಿಯಲ್ಲೇ ನೋಡಲು ಸಾಧ್ಯವೆ ? ಪುನರ್ಜನ್ಮದ ಹಲವಾರು ಪ್ರಕರಣಗಳಿಂದ ತನ್ನ ಹಿಂದಿನ ಬದುಕನ್ನು ಸ್ಮರಣೆಗೆ ತಂದುಕೊಳ್ಳಬಹುದು. ಆದರೆ ಸಾವಿನ ನಂತರದ ಬದುಕನ್ನು ಯಾರೂ ಕಂಡವರಿಲ್ಲ, ಸಾವಿನಾಚೆಯ ಪ್ರಪಂಚವನ್ನು ಜೀವಿತಾವಧಿಯಲ್ಲೇ ನೋಡಬೇಕು. ಸಾಪೇಕ್ಷತಾವಾದ ಈ ಸಂದರ್ಭದಲ್ಲಿ ನೆರವಿಗೆ ಬರಬಹುದು.

ಸಾವಿನಾಚೆಯ ಲೋಕಕ್ಕೆ....

ಐನ್‌ಸ್ಟೈನ್ ಅಂತರಿಕ್ಷ ನೌಕೆಯನ್ನೇರಿ ಹೊರಟಿದ್ದೇನೆ. ವೇಗ ಹೆಚ್ಚುತ್ತ ನಡೆದಿದೆ. ಅಗಾಧವಾಗಿ ಬ್ರಹ್ಮಾಂಡವನ್ನೆಲ್ಲ ಸುತ್ತಿ ವ್ಯಾಪಿಸುವಂತೆ ಹೆಚ್ಚುತ್ತಲೇ ಇದೆ. ಸುತ್ತಲಿನ ಪ್ರಪಂಚ ಕರಗಿ ನೀರಾಗುತ್ತಿರುವಂತೆಯೋ ಆವಿಯಾಗುತ್ತಲೇ ಇದೆ. ಪ್ರಪಂಚವೆಲ್ಲ ನನ್ನ ಬೆಂಬತ್ತಿ ಬಂದಂತೆ; ಎಲ್ಲೋ ಕೇಂದ್ರ ಬಿಂದುವಿನಲ್ಲಿ ಗುಪ್ತಗಾಮಿನಿಯಾಗಿ ಹರಿದು ಹೋಗುತ್ತಿರುವಂತಿದೆ. ವ್ಯೋಮನವನ್ನೆಲ್ಲ ಯಾರೋ ದೀರ್ಘವಾಗಿ ಎಳೆದು ಹೊಸಕಿ ಹಾಕಿದಂತೆ, ದೇಹ ಉದ್ದುದ್ದವಾಗಿ ಬೆಳೆಯುತ್ತ ನಡೆದಂತೆ, ತಲೆ ಅಡ್ಡಡ್ಡವಾಗಿ ವಿಕಾರವಾಗಿ ರೂಪಗೊಂಡಂತೆ ಭಾಸವಾಗತೊಡಗಿದೆ.

ಕಣ್ಣುಗಳಿಗೆ ಕತ್ತಲೆ-ಬೆಳಕಿನ, ಬಣ್ಣಬಣ್ಣದ ಬೆಡಗಿನ, ರಹಸ್ಯಮಯ, ವಿಸ್ಮಯ ದೃಶ್ಯಗಳು ಗೋಚರವಾಗುತ್ತಿರುವಂತೆ ಮೈಯಲ್ಲಿ ಜಡ ಆವರಿಸಿ ಚೈತನ್ಯ ಉಡುಗಿದಂತೆ ಭಾಸವಾಗುತ್ತಿದೆ. ಉಸಿರು ಸಿಕ್ಕಿದಂತಾಗಿ ಪೂರ್ಣ ಪ್ರಮಾಣದ ಕಣ್ಣುಗಳನ್ನು ಎದುರಿಗೆ ಹಾಯಿಸಿದೆ. ಮಾತೇ ಹೊರಡಲಿಲ್ಲ. ಕ್ರುದ್ಧ ಕಣ್ಣುಗಳಿಂದ ಬೆಂಕಿಯನ್ನು ಉಗುಳುತ್ತಿದ್ದ ನನ್ನೆದುರು ರಕ್ಕಸನಂತೆ ನಿಂತಿದ್ದಾನೆ. ನನ್ನ ಉಸಿರೇ ನಿಂತಂತಾಗಿ ಮೈಯಲ್ಲಿ ನಡುಕ ಹುಟ್ಟಿತು. ನನ್ನನ್ನು ತೀಕ್ಷ್ಣವಾಗಿ ದುರುಗುಟ್ಟಿಕೊಂಡು ಸುಟ್ಟು ಬಿಡುವನೋ ಎನ್ನುವಂತಿದೆ ಅವನ ಭಾವ. ನೌಕೆಯು ವೇಗ ಹೆಚ್ಚಿದಂತೆ ಅಗಾಧವಾಗಿ ಬೆಳೆಯುತ್ತ ನಡೆದಿದ್ದಾನೆ. ಉದ್ದುದ್ದ ಕೋರೆಯ ಕಾಲಪ್ರವಾಹ ದೈತ್ಯ. ನನ್ನನ್ನು ಕೊಂದು ತಿನ್ನಲು ಬಂದಂತೆ ನಾನು ಹಿಂದು ಹಿಂದಕ್ಕೆ ಸರಿಯತೊಡಗಿದೆ. ಕರಾಳ ಕೈಗಳೆರಡು ನನ್ನ ಕುತ್ತಿಗೆಯ ಹತ್ತಿರ ಬಂದಂತೆ, ಉಸಿರು ಎಳೆದು ಹಾಕಿದಂತಾಗಿ ಭಾಸವಾಗಿ ಬೆವತುಹೋದೆ. ಕಾಲದೈತ್ಯನಿಂದ ಪಾರಾಗಲು ನೌಕೆಯ ವೇಗವನ್ನು ಮತ್ತೊಮ್ಮೆ ಹೆಚ್ಚು ಮಾಡಿದೆ. ದೈತ್ಯನ ಕಣ್ಣುಗಳಲ್ಲಿ ಕ್ರೂರತೆ ಹೆಚ್ಚಾದಂತೆ ಕೋರೆಹಲ್ಲು ಕಟಕಟನೆ ಕಡಿಯಲು ಪ್ರಾರಂಭಿಸಿದ. ನನ್ನಮೇಲೆ ಹೆಚ್ಚಿನ ಆಕ್ರಮಣ ಮಾಡಲು ಸಿದ್ಧನಾದಂತೆ ತೋರಿದಾಗ ನೌಕೆಯ ವೇಗವನ್ನು ಅತ್ಯಧಿಕ ವೇಗಕ್ಕೆ ಓಡಿಸಿದೆ. ತಕ್ಷಣವೇ ಕಾಲದೈತ್ಯ ಕುಬ್ಜನಾಗುತ್ತ ನಡೆದಂತೆ, ತೀರ ಕುಬ್ಜನಾಗುತ್ತ, ಕೊನೆಗೆ ಬಿಂದುವಾಗಿ ಅಣುವಾಗಿ ಗಾಳಿಯಾಗಿ ಮಾಯವಾದ.

ದಂಗು ಬಡಿದಂತಾಗಿ ವಿಕಾರವಾದ ಧ್ವನಿಯೊಂದು ನನ್ನನ್ನು ಬಿಡುಗಡೆ ಮಾಡಿದಂತೆನಿಸಿತು.

ನೀಳವಾದ ಉಸಿರೆಳೆದು ಗಂಡಾಂತರ ಕಳೆದುದಕ್ಕೆ ಮನಸ್ಸಿಗೆ ನೆಮ್ಮದಿ ನೆಲೆಸುವಂತಾಯಿತು. ಕಾಲಮಾಪನ ಯಂತ್ರದಲ್ಲಿ ಕಣ್ಣುಹಾಯಿಸಿದಾಗ ಭಯಾಶ್ಚರ್ಯಗಳಿಂದ ಮೂಕ ವಿಸ್ಮಿತನಾದೆ. ಅದಾಗಲೇ ಭೂಮಿಯಮೇಲೆ ಐದು ಶತಮಾನಗಳೇ ಕಳೆದು ಹೋಗಿವೆ. ನೌಕೆಯನ್ನು ಅರ್ಧಕ್ಕೆ ತಡೆದು ಭೂಮಿಗೆ ಹಿಂತಿರುಗಿಸಿದೆ. ಕೇವಲ ಮೂವತ್ತು ಕ್ಷಣಗಳು ಮಾತ್ರ.

ವಿಚಿತ್ರ ವಿಶ್ವವೇ ನನ್ನೆದುರು ನಿಂತಿದೆ. ನನ್ನದೇ ಆದ ಮಾತೃಭೂಮಿ ವಿಚಿತ್ರ ವಿಶ್ವವಾಗಿ ನಿಂತಿದೆ. ನನ್ನ ಕಣ್ಣುಗಳನ್ನು ನಾನು ಒಂದು ಕ್ಷಣ ನಂಬದಾದೆ! ಅಗಾಧ ಬದಲಾವಣೆ! ವಿಜ್ಞಾನದ ಆವಿಷ್ಕಾರಗಳು ಎಲ್ಲೆಲ್ಲೂ ಕಾಣಬರುತ್ತಿವೆ. ಎಲ್ಲಿಯೂ ನರಪಿಳ್ಳೆ ಕಾಣಬರಲಿಲ್ಲ. ನಾನೊಬ್ಬ ಪರಕೀಯನೆಂಬಂತಾಗಿದ್ದೇನೆ. ಬೇರೊಂದು ಲೋಕದಿಂದ ಬಂದವನು ಎಂಬ ಅಸ್ತಿತ್ವವುಳ್ಳವನಾಗಿದ್ದೇನೆ. ನನ್ನ ಸ್ವಂತಿಕೆ, ನನ್ನ ವಿಚಾರಗಳಿಗೆ, ಭಾವನಾತ್ಮಕ ಧೋರಣೆಗಳಿಗೆ, ಮೌಲ್ಯಗಳಿಗೆ ಯಾವ ಬೆಲೆಯೂ ಇಲ್ಲ.

ನಾನು ಸಾವಿನಾಚೆಯ ಲೋಕದಿಂದ ಬಂದವನು ಸಾವಿನಾಚೆಯ ಲೋಕಕ್ಕೆ ಕೈಗೊಂಡ ಸಾಹಸದಂತ ಕತೆಯಾಗಬಹುದು. ಮೂಢನಂಬಿಕೆಯಾಗಬಹುದು. ನಿರಪೇಕ್ಷ ಮೌಲ್ಯಗಳು ನಿರಪೇಕ್ಷವಾಗಿಯೇ ಉಳಿಯುತ್ತವೆ. ಸಾಪೇಕ್ಷ ನಾಡಿನಲ್ಲಿ ನಿರಪೇಕ್ಷ ಬಾಳು ಅರ್ಥಹೀನ, ಸತ್ವಹೀನ. *

**ಬೆಳುದಿಂಗಳು**

ಪೋರ ಪೋರಿಯರು
ಚಕ್ಕಂದ ಆಡಲೆಂದು
ನಿಸರ್ಗ ಸೃಷ್ಟಿಸಿರುವ
Bed light.

**ಗುಲಾಬಿ**

ಈ ತುಂಟಿ
ಬಿಚ್ಚುವ ತುಟಿ
ಸುರುಳಿಗಳ ಮಧ್ಯೆ
ಕಾಣುವ ಅಂದ.

○ ಮೊಗಳ್ಳಿ ಚಿ. ಗಣೇಶ್

# ಗಿರವಿ ಅಂಗಡಿಯಲ್ಲಿ.......

* ಸುಬ್ಬಣ್ಣ ರಂಗನಾಥ ಎಕ್ಕುಂಡಿ

ಗಿರವಿ ಅಂಗಡಿಯಲ್ಲಿ ಮುಂಗಟ್ಟುಗಳ ಸಾಲು, ಜನ
ಯಾವ್ಯಾವುದೊ ವಸ್ತುಗಳನು ತಂದು,
ಸಂಸಾರದ ಬವಣೆ ತೋಡಿಕೊಂಡರು.
' ಇಲ್ಲಿ ಬಡ್ಡಿಯಿಲ್ಲವೆ ದಯೆಗೆ ಕೂಡ ಇಂದು ' ೧

ಬಡವರಿಗೆ ಕಷ್ಟಗಳು ಬಹಳ. ಒಬ್ಬೊಬ್ಬರೂ
ಕಂತುಳಲಿ, ಹೆಗಲಲ್ಲಿ ಹೊತ್ತುಕೊಂಡು
ಸಾಹುಕಾರಗೆ ಕೈ ಮುಗಿದು ಅಂದರು : ' ಸ್ವಾ....
ಮಿ,.... ತುಸು ಹಣವ ಕೊಡಿ, ಇದನ್ನಿಟ್ಟುಕೊಂಡು.' ೨

ಯಾವಾಗಲೂ ತೇವೆ–ಕಣ್ಣುಗಳಲ್ಲಿ. ಮನೆಯಲ್ಲಿ
ಬಾಣಂತಿ. ಹೊರಗೆ ಅಸಾಧ್ಯ ಚಳಿಯು
ಕಲ್ಲಿದ್ದಲಿಲ್ಲ. ಅಗ್ಗಿಷ್ಟಿಕೆಗೆ. ಹಾಗಾಗಿ,
ಗಿರವಿಗೆ ತಂದದ್ದು, ಒಂದೇ ಬಳೆಯು. ೩

' ತಾಯಿಗೆ ಒಮ್ಮೆಲೆ ಕಾಯಿಲೆ. ಹುಚ್ಚಂತೆ,
ನೆತ್ತರಿನ ಹನಿಯಿದ್ದ ಲೋಲಾಕಿವು.
ಅವಳೇ ಕಿತ್ತೆಸೆದದ್ದು. ಆಸ್ಪತ್ರೆ ಸೇರಿಸಲು.
' ನಮಗಿನ್ನು ಬ್ರೆಡ್ಡು ತರುವವರು ಯಾರು ?' ೪

' ಇದು ನಮ್ಮ ಮದುವೆಯುಂಗುರ. ಕಂದನಿಗೆ
ಹುಟ್ಟು ಹಬ್ಬವು ಅವಗೆ ನಾಳೆ ದಿನವೆ.
ಒಲೆಯ ಬಳಿ ಹರಿದು ಕೈ ಸುಟ್ಟುಕೊಂಡಿದೆ
ಗೊಂಬೆಯನು ತರಬೇಕು ಇಂದೆ ಅವಗೆ.' ೫

ಸಾಹುಕಾರನ ಕಿವಿಗೆ ಹರಿದದ್ದು ಕಷ್ಟಗಳೆ....
ಅಷ್ಟೋ ಇಷ್ಟೋ ಹಣವ ಕೈಗೆ ಸುರಿದು,
ತನ್ನ ಪಾಡಿಗೆ ತಾನು ಲೆಕ್ಕ ಬರೆಯುತ್ತಿದ್ದ
ಗಿರವಿಯಿಟ್ಟವರಿಗೆ ರಶೀದಿ ಹರಿದು. ೬

ತುಸು ದೂರ ನಿಂತ ಶ್ವಿತ ಹೆಂಗಸು. ಅವಳ
ಕೈಯಲ್ಲಿ ಇತ್ತೊಂದು ಸಣ್ಣ ಗಂಟು.
ಸಾಹುಕಾರನು ನೋಡಿ ಕರೆದು ಕೇಳಿದನು—
‘ ಏನಾಗಬೇಕಿತ್ತು ? ಏನು ಉಂಟು ?’ ೭

ಹೆಂಗಸಂದಳು ‘ ಸ್ವಾಮಿ, ಹಣ ಬೇಕಿತ್ತು
ಗಿರವಿಗೆ ತಂದಿದ್ದೆ, ಇದನ್ನಿಂದು
ಗಂಟಿನಲ್ಲಿಟ್ಟಿರುವೆ, ಬಟ್ಟೆ ತೋರಿಸಿದಳು
ಅಂಗಿ, ಷರಾಯಿ, ಕೋಟು, ಟಾಯರ್ ಒಂದು. ೮

ಹುಬ್ಬೇರಿಸುತ್ತಲೆ ಸಾಹುಕಾರನು ಅಂದ :
‘ ನಿಮ್ಮವೇನಲ್ಲ. ಇವು ಯಾರ ಬಟ್ಟೆ ?’
ಹೆಂಗಸಂದಳು. ‘ ಒಡೆಯರವು. ಸಧ್ಯಕ್ಕೆ
ಅವರ ಸಂಸಾರಕ್ಕೆ ತುಂಬಾ ಕಷ್ಟ.’ ೯

ಹೆಂಡತಿಗೆ ಎದೆ ನೋವು. ಮಗನಿಗೆ ಕಾಯಿಲೆ
ಉಲ್ಬಣ. ಔಷಧಕೆ ಇಲ್ಲ ಕಾಸು.
ಇವನ್ನುಳಿದರೆ, ಬೇರೆ ಬಟ್ಟೆಗಳಿಲ್ಲ.
ಯಾರಿಗೂ ಬರಬಾರದಿಂಥ ತ್ರಾಸು. ೧೦

ಹಾಗೆಂದೆ ಆತ ಖುದ್ದಾಗಿ ಬಂದಿಲ್ಲ.
ಉಪಕಾರವಾದೀತು ಇಂಥ ಸಮಯ.
ಬಟ್ಟೆಯೆತ್ತಿಕೊಳ್ಳುತ್ತ, ಸಾಹುಕಾರ ಕೇಳಿ
ದನು, ಬರೆಯುಂಣಿಗೊಳ್ಳುತ್ತ ರಶೀತಿಯ. ೧೧

ಹೆಸರೇನು ನಿನ್ನದು ? ನಿನ್ನ ಆ ಒಡೆಯನದು ?
ಹೆಲೆನ ಡೆಮ್ಯೂತ—ನನ್ನ ಹೆಸರು.
ಕಾರ್ಲ್‌ಮಾರ್ಕ್ಸ್—ಒಡೆಯರವು. ಆ ಮೇ
ಲೆ ರಶೀತಿಯೊಂದಿಗೆ ಬಂತು ಸ್ವಲ್ಪ ಹಣವು. ೧೨

ಜಿ. ಎನ್. ಮೋಹನ್

# 'ಪ್ರೊಮೀಥಿಯಸ್ ಕಣ್ಣಿನ ಬೆಳಕು ನಮ್ಮ ಕಾವ್ಯದ ಉಸಿರಾಗಬೇಕು'

—ಸು. ರಂ. ಎಕ್ಕುಂಡಿ

'ನಮ್ಮ ಜನಾಂಗದ್ದು ಪ್ರೊಮೀಥಿಯಸ್ ಬದುಕು'—ಪ್ರೊಮೀಥಿಯಸ್ ಗ್ರೀಕ್ ಪುರಾಣದ ದೇವದೇವತೆ, ಆರಾಧನೆ, ವೈಭವ ಪುಟಗಳಲ್ಲಿ ಅಡಗಿದ್ದ ಕಾವು ನೀಡುವ ಬೆಂಕಿ ಬೀಜ; ಆತನ ಇತಿಹಾಸ ದಾಖಲಾದದ್ದೂ ಸಹ ಆತನ ಮರಣದಿಂದ. ಪ್ರೊಮೀಥಿಯಸ್ ಗ್ರೀಕ್ ಜನರ ಮಧ್ಯದಲ್ಲಿ ಬೇರು ಬಿಟ್ಟವನು. ಗ್ರೀಕ್ ಜನರಿಗೆ ಹಸಿವು ನೀಗಿಸುವ ಮೂಲ ಶಕ್ತಿಯಾದ ಬೆಂಕಿ ಬೇಕಿತ್ತು. ಬೆಂಕಿ ಇಲ್ಲದೆ ಗ್ರೀಕ್ ಕತ್ತಲಿನ ಕೂಪದಲ್ಲಿ ಮುಳುಗಿತ್ತು. ಎಲ್ಲೆಲ್ಲೂ ಹಸಿವು, ಹಾಹಾಕಾರ. ಪ್ರೊಮೀಥಿಯಸ್ ಅವರ ನೋವುಗಳನ್ನು ಕಂಡವ. ಆದರೆ ಬೆಂಕಿ ಇದ್ದದ್ದು ಗ್ರೀಕರ ದೇವತೆ ಸ್ವರ್ಗದಲ್ಲಿದ್ದ ಜ್ಯುಪಿಟರ್‌ನ ಬಳಿ. ಜ್ಯುಪಿಟರ್ ದೇವತೆಯ ಬಳಿ ಏನಾದರೂ ಬೆಂಕಿ ಕದ್ದು ತರಲು ಹೋದರೆ ಅಲ್ಲಿ ಕಾದಿದ್ದ ಗಿಡುಗ ಕಿತ್ತು ತಿನ್ನಲು ಹೋಗುವವರ ಎದೆ ಕುಕ್ಕಿ ಕುಕ್ಕಿ ಸಾಯಿಸುತ್ತದೆ. ಪ್ರೊಮೀಥಿಯಸ್‌ಗೆ ದ್ವಂದ್ವ. ಜನರ ಕಷ್ಟ ನೀಗಿಸದೆ ಸುಮ್ಮನಿರಬೇಕೋ ಅಥವಾ ಬೆಂಕಿ ಕದ್ದು ತಂದು ತನ್ನ ಜನರಿಗೆ ನೀಡಿ ತಾನು ಸಾಯಬೇಕೋ ? ಅವನ ಕಣ್ಣುಗಳಲ್ಲಿ ಕಾಂತಿ ಬೆಳಗಲು ಆರಂಭಿಸುತ್ತದೆ.

'ಆ ಪ್ರೊಮೀಥಿಯಸ್‌ನ ಕಣ್ಣಿನ ಬೆಳಕು ನಮ್ಮ ಕಾವ್ಯದ ಉಸಿರಾಗಬೇಕು.' 'ಅನಕ್ಷರಸ್ಥ ಮುಗ್ಧ ಜನಗಳ ಸಂಕಷ್ಟಗಳ ಮಧ್ಯೆ ನಾವು ಕವಿಗಳು ಅವರಿಗೆ ಬೆಂಕಿಯನ್ನು ಹೊತ್ತು ತರುವ ಪ್ರೊಮೀಥಿಯಸ್‌ಗಳಾಗಬೇಕು. ಪ್ರೊಮೀಥಿಯಸ್‌ನ ಬೆಂಕಿ ತರುವ ನಿರ್ಧಾರದಿಂದ ಅವನ ಕಣ್ಣಿನಲ್ಲಿ ಹೊಳೆದ ಬೆಳಕು ನಮ್ಮನ್ನು ಕಾಡಬೇಕು' ಎನ್ನುವ ಸುಬ್ಬಣ್ಣ ರಂಗನಾಥ ಎಕ್ಕುಂಡಿಯವರ ತುಡಿತಗಳು, ಆಲೋಚನೆಗಳೇ ಅವರನ್ನು ನಿರಂತರ ಪ್ರಯೋಗಶೀಲ ಕವಿಯನ್ನಾಗಿಸಿ, ಅವರ ಎದೆಯಲ್ಲಿ ಹೊಸತನ್ನು ಹೊತ್ತು ತರುವ ಪ್ರೊಮೀಥಿಯಸ್ ಹುರುಪನ್ನು ಸದಾ ಜೀವಂತವಾಗಿರಿಸಿದೆ.

ನಮ್ಮ ದಶಕಗಳ ಹಿರಿಯ ಕವಿಗಳ ತಲೆಮಾರಿನಲ್ಲಿ ಸೇರಿ ಹೋಗುವ ಸು. ರಂ. ಎಕ್ಕುಂಡಿಯವರಿಗೆ ಯಾವ ಕ್ಯಾನ್‌ವಾಸ್ ತೊಡಿಸುವುದು ? ಒಮ್ಮೆ ರಮ್ಯದಂತೆ, ಇನ್ನೊಮ್ಮೆ ನವ್ಯದಂತೆ, ಮಗದೊಮ್ಮೆ ಮತ್ತೊಂದರಂತೆ ಕಾಣಬರುವ ಎಕ್ಕುಂಡಿಯವರ ಕಾವ್ಯ ಮೂಕು ಹನಿ ಮಳೆ ಬಿದ್ದು, ಮಣ್ಣ ವಾಸನೆ ಎದ್ದು, ಮುಗಿಲಿನಲ್ಲಿ ಮೂಡುವ

ಬಣ್ಣ ಬಣ್ಣದ ಕಮಾನಿನಂತೆ. ವಿಸ್ತಾರವಾದ ನಿಸರ್ಗವನ್ನು ಹಿಡಿದಿಡಬಲ್ಲ ಪುಟ್ಟ ಕ್ಯಾನ್‌ವಾಸ್‌ನಂತೆ. ಎಕ್ಕುಂಡಿ ಎಲ್ಲಾ ಸಾಹಿತ್ಯ ಮಾರ್ಗಗಳನ್ನೂ ಹಾದು ಬಂದು ಅವುಗಳ ಧಾಟಿ, ಧ್ವನಿಗಳೆಲ್ಲವನ್ನೂ ಹಿಡಿದಿಡಬಲ್ಲ ಕ್ಯಾನ್‌ವಾಸ್ ಆಗಿದ್ದಾರೆ.

'ಪ್ರತಿಭೆ'ಯನ್ನು ಕೇವಲ ಪ್ರಶಸ್ತಿ, ವಿಮರ್ಶೆ, ಸನ್ಮಾನಗಳ ಮಾನದಂಡದಿಂದ ಮಾತ್ರ ಅಳೆದರೆ ಕಿರಾ ಕುಬ್ಜರಾಗಿಬಿಡುವ ಎಕ್ಕುಂಡಿ, 'ಸಾಮಾನ್ಯ ಚಿತ್ರಕ್ಕೆ ಸುವರ್ಣದ ಚೌಕಟ್ಟು' ಹೊದಿಸುವ ನಮ್ಮ ಅಕ್ಯಾಡೆಮಿಷಿಯನ್ಸ್‌ಗಳಿಂದ ದೂರವೇ ಉಳಿದು ತಮ್ಮ ಪ್ರತಿಭೆಯ ಹೊಳಹುಗಳನ್ನು ಕಾವ್ಯದಲ್ಲಿ ಜೀವಂತವಾಗಿರಿಸುವ ಹಾದಿಯಲ್ಲಿದ್ದಾರೆ. ಎಕ್ಕುಂಡಿಯವರು ನಡೆದುಬಂದ ಹಾದಿ, ಆಡ್ಡಾಡಿದ ಮಾರ್ಗಗಳು, ಹಿಡಿದಿಟ್ಟ ವಸ್ತುಗಳು, ಪಲುಕುಗಳನ್ನು ಕಂಡುಹಿಡಿಯಲು ಅವರ ಕವಿತೆಗಳ ಕದ ತಟ್ಟಿ ನೋಡಬೇಕು.

ಕರಗವನು ಹೊತ್ತಂತೆ ಹೊತ್ತಿದೆ ವಸಂತವಿದು
ಚಿಗುರಿನಾಸೆಯು ಜೀವಜಡಗಳಲ್ಲಿ
ರಸಯಾತ್ರೆ ಕೈಗೊಂಡು ದಣಿದಂತ ದುಂಬಿಗಳು
ಕುಡಿದಿಹವು ಪುಷ್ಪರಸ ಕೊಡಗಳಲ್ಲಿ
ಪರಿಮಳದ ಪಲ್ಲಕಿಯಲಿ ಚೈತ್ರ ಬಂದಿರಲು
ಮನದ ಮಾಮರದಲ್ಲಿ ಸುರಿದ ಹೂವು
ನಾಗಸ್ವರವ ನುಡಿಸಿ ತಂಬೆಲರು ಸಾಗಿರಲು
ಇನ್ನೆಲ್ಲಿ ಉಳಿಯುವುದು ಹಳೆಯ ನೋವು
ಫಾಲ್ಗುಣದ ಉರಿಯಲ್ಲಿ ಕಹಿ ಕಷ್ಟಗಳು ಬೂದಿ
ಕಾಡಿನಲಿ ಕಣಿವೆಯಲಿ ಏನು ಹರ್ಷ
ವಸಂತವು ಕಾಲಿಡಲು ಹೂವುಗಳು ಹಾಡುಗಳು
ಕಾಯಲಿಲ್ಲವೆ ಇದಕೆ ಒಂದು ವರ್ಷ
ಇಳೆಗೆ ಬಂದಿಳಿದ ಓ ಚೈತ್ರವೇ ಬಾ ಒಳಗೆ
ಬೇವಿನಲಿ ಒಂದಿಷ್ಟು ಬೆಲ್ಲ ಕಲೆಸು
ರೇಷಿಮೆಯ ರೆಕ್ಕೆಗಳ ಬಿಡಿಸಿದ ಪತಂಗವೇ
ಎಲ್ಲಿಹುದು ನಾವೆಲ್ಲ ಕಂಡ ಕನಸು
ಎಲೆಯ ಮರೆಯಲಿ ಕುಹುಕುಹೂ ಬೆಟ್ಟಗಳು
ಹೂ ಬಿಸಿಲ ಕಾಸುತಿವೆ ಕಣಿವೆ ಹಾಡು
ಹುಲ್ಲಿನಲಿ ಬೆಟ್ಟದಲಿ ಹೊಸತನವ ನೀಡಿರುವ
ಚೈತ್ರವೇ ನಮಗಿಷ್ಟು ಸುಖವ ನೀಡು.

(ಒಳಗೆ ಬಾ ಚೈತ್ರ)

ಕಥೆ, ಕಾವ್ಯ, ಅನುವಾದ, ವಿಮರ್ಶೆಗಳಲ್ಲೆಲ್ಲಾ ಕೈಯಾಡಿಸಿರುವ ಎಕ್ಕುಂಡಿಯವರು ಇದುವರೆಗೆ, ಆನಂದತೀರ್ಥರು 1953 (ಖಂಡಕಾವ್ಯ), ಸಂತಾನ 1953, ಹಾವಾಡಿಗರ ಹುಡುಗ 1967, ಮತ್ಸ್ಯಗಂಧಿ 1975, ಬೆಳ್ಳಕ್ಕಿಗಳು 1982 (ಕವನಸಂಕಲನ), ನೆರಳು 1960 (ಕಥಾ ಸಂಕಲನ), ರಶಿಯನ್ ಎರಡು ಕಾದಂಬರಿಗಳು, ಪ್ರತಿಬಿಂಬ (ಅನುವಾದ), ಪು. ತಿ. ನರಸಿಂಹಾಚಾರ್ (ವಿಮರ್ಶೆ) ಗಳನ್ನು ಪ್ರಕಟಿಸಿದ್ದಾರೆ.

ಎಕ್ಕುಂಡಿಯವರು ಇದ್ದದ್ದು ನಿಸರ್ಗದ ತವರೂರಾದ ಉತ್ತರ ಕರ್ನಾಟಕದ ಬಂಕಿಕೊಡ್ಲದಲ್ಲಿ. ಸಮುದ್ರ ತೀರದ ಈ ಊರಿನಲ್ಲಿ ಸುಮಾರು ವರ್ಷಗಳ ಕಾಲ ಇದ್ದ ಎಕ್ಕುಂಡಿಯವರ ಕವನಗಳಲ್ಲಿ ಅಲ್ಲಿನ ನಿಸರ್ಗ ಹೆಣೆದುಕೊಂಡಿದೆ. ಕವನಗಳಲ್ಲಿ ನಿಸರ್ಗ ಬಂದೊಡನೆ ಭಾವನಾವಶರಾಗಿಬಿಡುವ ಎಕ್ಕುಂಡಿಯವರಿಗೆ ಹಾದಿಯ ಮಧ್ಯದಲ್ಲಿ ಕೇಳಬರುವ ಕೋಗಿಲೆ ಧ್ವನಿ, ಗದ್ದೆಗಳ ಮಧ್ಯದಿಂದ ಥುತ್ತೆಂದು ಹಾರುವ ಬೆಳ್ಳಕ್ಕಿಗಳು, ಭೋರ್ಗರೆವ ಉಪ್ಪುಕಡಲು, ಚಾಮರ ಬೀಸಿ ಹಾಡುವ ತೆಂಗಿನ ಮರಗಳ ಸಾಲು ಸಾಲು, ಕೋಪಿಸಿ ಮೈಮೇಲೆ ದಿನಗಟ್ಟಲೆ ಸುರಿದು ಹಾವಳಿ ಎಬ್ಬಿಸುವ ಮಳೆರಾಯ ಎಕ್ಕುಂಡಿಯವರ ಕವನಗಳಲ್ಲಿ ಕುಸುರಿಗೆಲಸ ನಡೆಸಿವೆ. ಆದರೆ ನಿಸರ್ಗದಲ್ಲಿ ತೊಯ್ದ ಎಕ್ಕುಂಡಿಯವರಿಗೆ ಅಷ್ಟೇ ವರ್ಷಗಳು ಆ ಕಡಲ ತಡಿಯ ತೆಂಗಿನ ಗರಿಕೆಯ ಗುಡಿಸಲುಗಳಿಂದ ನಿಟ್ಟುಸಿರುಗಳೂ ಕೇಳಿಸಿವೆ. ಕಡಲ ತೀರದಲ್ಲಿ ಬಂಕಿ ಹಚ್ಚಿ ಗುಮಟೆ ನುಡಿಸುತ್ತಾ ಹಾಡು ಹೇಳುತ್ತಾ ಇದ್ದವರ ಹಿಂದೆ ಎಷ್ಟು ನಿಟ್ಟುಸಿರುಗಳು ಇವೆಯೆಂಬುದು ಎಕ್ಕುಂಡಿಯವರಿಗೆ ಗೊತ್ತಿರುವುದರಿಂದಲೇ ನಿಸರ್ಗವನ್ನೂ ಹಿಂದೆ ತಳ್ಳಿ ಅವರ ಕಾವ್ಯದಲ್ಲಿ ಪ್ರೊಮಿಥಿಯಸ್‌ಗಳು ಹಲುಬುತ್ತಾರೆ. 'ಕವಿ ನಿಸರ್ಗ ಹೊದ್ದವ ಮಾತ್ರನಾಗಬಾರದು.' ಎನ್ನುವ ಎಕ್ಕುಂಡಿ ರಾಮಚಂದ್ರ ಶರ್ಮರ ಕವನ ಸಂಕಲನಕ್ಕೆ ಮುನ್ನುಡಿ ಬರೆಯುತ್ತಾ—

"ಕಾವ್ಯವಾಗಲಿ, ಸಾಹಿತ್ಯವಾಗಲಿ, ಸಜೀವವಾಗಿರಬೇಕಾದರೆ ಅದರ ಬೇರುಗಳು ಜನತೆಯ ಬಾಳಿನಲ್ಲಿರಬೇಕೆಂದು ಕಾಡ್ವೆಲ್ ತನ್ನ 'Illusion and Reality ಯಲ್ಲಿ ಹೇಳಿದ್ದಾನೆ. ಈ ಮಾತಿಗೆ ಇತಿಹಾಸ ಸಾಕ್ಷಿಯಾಗಿ ನಿಂತಿದೆ. ಎಂಥ ಅದ್ಭುತವಾದ ಶಬ್ದ ಸಂಪತ್ತಿದ್ದರೂ, ಅಲಂಕಾರಗಳಿದ್ದರೂ ನಮ್ಮ 'ಮಹಾಕವಿ' ಗಳನ್ನು ನಾವು ನಮ್ಮ ಜನತೆಯ 'ಗುಡಿಸಲು'ಗಳಲ್ಲಿ ಕೇಳುತ್ತಿಲ್ಲ. ಒಪ್ಪಿದರೂ ಸರಿ, ಒಪ್ಪದಿದ್ದರೂ ಸರಿ ಇಂದಿನದು ಜನಯುಗ. ಕವಿ ಜನವಾಣಿಯಾಗದಿದ್ದರೆ ಅವನು ಏನು ಬರೆದರೂ ಎಷ್ಟು ಬರೆದರೂ ಅಷ್ಟೆ. ಹೊಸಗನ್ನಡದಲ್ಲಿ ಇಂಥ ಕಾವ್ಯ ಈಚೆ ಬರುತ್ತಿರುವುದು ನಮ್ಮ ಉಜ್ವಲ ಭವಿಷ್ಯದ ಒಂದು ಚಿಹ್ನೆಯಾಗಿದೆ. ಹೊಸಗನ್ನಡ ಕಾವ್ಯದ ಮೂರು ತಲೆಮಾರುಗಳಲ್ಲಿ ಕಾಣದ ಹೊಸ ದೃಷ್ಟಿಯೊಂದು ಈಗ

ಒಡಮೂಡುತ್ತಿದೆ. ಕಲೆಗಾಗಿ ಕಲೆ, ಕಾವ್ಯಕ್ಕಾಗಿ ಕಾವ್ಯ ಎಂದು ನಂಬಿದವರು ತಮ್ಮ ಮನಸ್ಸನ್ನು, ನಿರ್ಧಾರವನ್ನು ಬದಲಿಸುತ್ತಿದ್ದಾರೆ. ಜನ ಓದಬೇಕೆಂದಲ್ಲವೇ ಬರೆಯುವುದು ? ತಮ್ಮ ನಿರಾಸೆ, ಆಸೆ, ಸುಖದುಃಖಗಳು ಇಲ್ಲದ ಕಾವ್ಯ ಓದಿ ಜನ, ಅಂಥದ್ದನ್ನು ಓದಬೇಕೆಂದು ಮತ್ತೊಮ್ಮೆ ಆಸೆ ಪಟ್ಟಾರೆ ?

ಈ 'ಜನಯುಗ' ಕನ್ನಡದಲ್ಲಿ, ಈಚೆಗೆ ಆರಂಭವಾಗಿದೆ. ಕಾವ್ಯವನ್ನು ಜನ ಜೀವನದ ಹೋರಾಟಕ್ಕೆ ಮೀಸಲಿಟ್ಟು ಅವರ ಬದುಕನ್ನು ಬೆಳಗುವುದು ಇದರ ಗುರಿ. ಇಂಥ ಕಾವ್ಯವನ್ನು 'ಎಡ ಕಾವ್ಯ, ಕೆಂಪು ಕಾವ್ಯ' ಎಂದು ಕರೆಯುತ್ತಾರೆ. ಕರೆದರೂ ಸರಿಯೆ. ಈ ಕಾವ್ಯ, ಕಾವ್ಯದ ಇತಿಹಾಸದಲ್ಲಿನ ಸಮಸ್ಯೆಗಳನ್ನು ಸ್ಪಷ್ಟವಾಗಿ ತಿಳಿದು ಕೊಂಡಿದೆ. ಹಾಗೆ ಅದು ಸ್ಪಷ್ಟವಾಗಿ ಹೇಳಿದೆ. ಇನ್ನೂ ಸ್ಪಷ್ಟವಾಗಿ ಹೇಳುವು ದಾದರೆ ಇದು ಕಮ್ಯೂನಿಸ್ಟ್ ಕಾವ್ಯ. ನಮ್ಮ ಪತ್ರಿಕೆಗಳು ಕೂಗುವಂತೆ ದರೋಡೆ ಗಾರ ಕಾವ್ಯ ! ಇಂಥ ಕಾವ್ಯ, ಇಂಥ ಬಾಳು ನಾವು ಒಪ್ಪಿದರೂ ಸರಿ, ಒಪ್ಪದಿದ್ದರೂ ಸರಿ ಬರುವುದನ್ನು ಯಾರೂ ತಡೆಯಲಾರರು."

'ಯೋಧ ನಡೆಯುವ ದಾರಿ, ಕವಿಯು ನಡೆಯುವ ದಾರಿ ಕೂಡ' ಎಂಬುದು ಎಕ್ಕುಂಡಿ ಅವರ ಅಭಿಪ್ರಾಯ. ಈ ನಿಟ್ಟಿನಲ್ಲಿ ಅವರ ಸಾಮಾಜಿಕ ಸ್ಪಂದನದ ಪ್ರಯತ್ನವೇನೆಂದು ಪ್ರಶ್ನಿಸಿದೆ. ನಮಗೆ ತಿಳಿಯದೆಯೆ ಸಂದರ್ಶನ ಪ್ರಾರಂಭವಾಗಿ ಬಿಟ್ಟಿತ್ತು. ಅವರು ಹೊರಗೆಡಹಿದ ವಿಚಾರಗಳು ನಿರಂಜನರ 'ಚಿರಸ್ಮರಣೆ'ಯ ಹಿಂದೀ ಮಾಸ್ತರರನ್ನು ನೆನಪಿಸುತ್ತಾ ಹೋಯಿತು....

'ನಾನು ಬೆಳೆದದ್ದು ಅತ್ಯಂತ ನಿಕೃಷ್ಟವಾದ ಪರಿಸ್ಥಿತಿಯಲ್ಲಿ. ನಾನು ಬೆಳೆದ ಬಗೆ ಯಾವ ನಿಕೃಷ್ಟ ಬಡ ವ್ಯಕ್ತಿ ಬೆಳೆದ ಬಗೆಗಿಂತ ಭಿನ್ನವಾಗಿರಲಿಲ್ಲ. ಬೆಂಕಿಯ ಹಾದಿ ಯಲ್ಲಿ ನಡೆದ ನನಗೆ ನಾವು ತುಳಿದ ಕಾವಿನ ಅರಿವಿತ್ತು. ಬೆಂಕಿಯನ್ನು ತುಳಿದು ನಡೆದವನು ಆ ಬೆಂಕಿಯನ್ನು ಕುರಿತು ಹೇಳುವವರೆಗೂ ಅದು ಬೇರೆಯವರಿಗೆ ಅರಿವಾಗು ವುದಿಲ್ಲ ಎನಿಸುವುದಕ್ಕೆ ಪ್ರಾರಂಭಿಸಿತ್ತು. ನನ್ನ ಆ ನೋವಿನ ದಿನಗಳಲ್ಲಿಯೇ ನನ್ನನ್ನು ಓದುವುದರಲ್ಲಿ ತೊಡಗಿಸಿಕೊಳ್ಳುತ್ತಾ ಹೋದೆ. ಹಾಗೆ ಓದಲು ಪ್ರಾರಂಭಿಸಿದಂತೆ ಹೊಸ ಹೊಸ ಅರಿವಿನ ಜಗತ್ತಿಗೆ ನನ್ನನ್ನು ತೆರೆದುಕೊಳ್ಳುತ್ತಾ ಹೋದಂತೆ ನಾನು ಓದಿದ Mind in change ಪುಸ್ತಕ ನನ್ನನ್ನು ಗಾಢವಾಗಿ ಕಾಡಿತು. ನನ್ನ ದೃಷ್ಟಿಕೋನವನ್ನು ಬದಲಾಯಿಸಲು ಅದು ಸಾಧ್ಯ ಮಾಡಿತು. ಆ ಹೊತ್ತಿನಲ್ಲಿ ನಮ್ಮ ಮನೆಯ ಬಳಿಯೇ ಕಮ್ಯುನಿಸ್ಟ್ ಪಕ್ಷದ ಕಛೇರಿಯಿತ್ತು. ಫ್ರೆಡರಿಕ್ ಜಾರ್ಜಿಯೋ, ಲೋಕ, ಕ್ರಿಸ್ಟಾಫರ್ ಕಾಡ್‌ವೆಲ್, ಮಾಯ್‌ಕೋವ್‌ಸ್ಕಿ ಮುಂತಾ ದವರು ಅಲ್ಲಿಂದಲೇ ಪರಿಚಿತರಾದದ್ದು. ಅವರ ಕಾವ್ಯಗಳಿಗೆ ನನ್ನನ್ನು ತೆರೆದುಕೊಂಡೆ.

ಹೊಸ ನಿರ್ಧಾರ ತೆಗೆದುಕೊಳ್ಳಬೇಕಾಗಿತ್ತು. ಅಷ್ಟರಲ್ಲಿ ಓದೂ ಸಹ ಮುಗಿದಿತ್ತು. ಶಿಕ್ಷಕನಾಗಿ ಮುಂದುವರೆಯಬೇಕು ಎನಿಸಿತ್ತು. ಕ್ರಾಂತಿಗಿಂತ ಕ್ರಾಂತಿಗೆ ಜನರನ್ನು ತಯಾರು ಮಾಡುವ ಕೆಲಸ ಅತ್ಯಂತ ಕಷ್ಟವಾದದ್ದು ಎಂಬ ಮಾತು ಗುಂಯ್‌ಗುಡುತ್ತಿತ್ತು. ನನ್ನ ಮುಂದಿನ ಪೀಳಿಗೆಗೆ ನಾನು ಕಲಿತ ಓದನ್ನು, ಅರಿವನ್ನು ಧಾರೆಯೆರೆಯಬೇಕು ಎನಿಸಿತ್ತು. ಅದಕ್ಕೆ ಶಿಕ್ಷಕ ವೃತ್ತಿಯೇ ಸರಿಯಾದ ಮಾರ್ಗ ಎನಿಸಿತು. ಅಸ್ಪೃಶ್ಯರಲ್ಲಿ ಅಸ್ಪೃಶ್ಯವಾದ ಬೆಂಕಿಕೊಂಡ್ಲದಂತ ಕುಗ್ರಾಮವನ್ನು ಆರಿಸಿಕೊಂಡೆ. ಅಷ್ಟರಲ್ಲಿ ಕಮ್ಯುನಿಸ್ಟ್ ಚಟುವಟಿಕೆಗಳು ತೀವ್ರವಾಗಿ ಆ ಚಟುವಟಿಕೆಗಳು ಆಳುವ ವರ್ಗದ ಕಣ್ಣು ಕೆಂಪಗೆ ಮಾಡಿತ್ತು. ಕಮ್ಯುನಿಸ್ಟ್ ಪಕ್ಷದ ಮೇಲೆ ನಿಷೇದ ಹೇರಲಾಯಿತು. ಹಲವರು ಭೂಗತರಾಗಿ ಚಟುವಟಿಕೆ ನಡೆಸಲು ಪ್ರಾರಂಬಿಸಿದ್ದರು. 'ಜನಶಕ್ತಿ' ಪತ್ರಿಕೆಗೆ ನಾವೆಲ್ಲಾ ಆ ಭಯದ ದಿನಗಳಲ್ಲೂ ಬರೆಯಲು ಪ್ರಾರಂಬಿಸಿದ್ದೆವು. ಕುಳಕುಂದ ಶಿವರಾಯ (ನಿರಂಜನ), ಚನ್ನವೀರ ಕಣವಿ ಮುಂತಾದವರೊಡನೆ ಪ್ರಗತಿಶೀಲ ಚಳುವಳಿ ಪ್ರಾರಂಭವಾಯ್ತು. ನನ್ನನ್ನು ಅದರಲ್ಲಿ ತೊಡಗಿಸಿಕೊಂಡೆ. ಇಂದು ಸುಮಾರು ವಿದ್ಯಾರ್ಥಿಗಳು ನನ್ನಿಂದ ಹಾದು ಹೋಗಿದ್ದಾರೆ. ಅವರಿಗೆ ಸಾಮಾಜಿಕ ಕಳಕಳಿ ಮೂಡಿಸುವ ಪ್ರಯತ್ನವನ್ನಾದರೂ ಮಾಡಿದ್ದೇನೆ ಎಂಬ ಸಮಾಧಾನ ನನಗಿದೆ. ಆದರೆ, ಇಂದಿಗೂ ನಾನು ಪಾರ್ಟಿ ಕಾರ್ಯಕರ್ತನಾಗಿ ಹೋರಾಡಲು ಸಾದ್ಯವಾಗಲಿಲ್ಲ ಎಂಬ ಕೊರಗು ಭಾದಿಸುತ್ತಿದೆ. ನನ್ನ ಪರಿಸ್ಥಿತಿಗಳು ನನ್ನನ್ನು ಹಿತದಲ್ಲಿಟ್ಟಿದ್ದವು. ಆದರೆ ನನಗೆ ಅನಿಸುತ್ತದೆ—

'ಕೆಲವರು ಯೋಧರಾಗಿ ರಣರಂಗಕ್ಕೆ ಹೋಗುತ್ತಾರೆ. ಅದು ಸಾದ್ಯವಾಗದೆ ಉಳಿಯಲೇಬೇಕಾದವರು ಅವರಿಗೆ ಕತ್ತಿ, ಗುರಾಣಿ, ಶಸ್ತ್ರಗಳನ್ನು ತಯಾರಿಸುತ್ತಾರೆ.'

ಮೋಹನ್ : ಕಾವ್ಯವಾಗಲಿ, ಸಾಹಿತ್ಯವಾಗಲಿ ಸಜೀವವಾಗಿರಬೇಕಾದರೆ ಅದರ ಬೇರುಗಳು ಜನತೆಯ ಬಾಳಿನಲ್ಲಿರಬೇಕು ಎಂದ್ದಿದೀರಿ. ನಿಮ್ಮ ಕವಿತೆಗಳಲ್ಲಿ ಭಾವಗಳು ಪ್ರಣಯವಾಗಿ, ಭಕ್ತಿಯಾಗಿ, ಅನುರಾಗವಾಗಿ ಕಾಣಿಸಿಕೊಳ್ಳುತ್ತವೆ ಎನ್ನುವಾಗ ನಿಮ್ಮ ವಿಚಾರಗಳು ಮತ್ತು ರಚನೆಗಳಲ್ಲಿ ಅಂತರ ಕಾಣುವುದಿಲ್ಲವೆ ?

ಎಕ್ಕುಂಡಿ : ಹೌದು, ನನ್ನ ಪ್ರಾರಂಭದ ದಿನಗಳ ಕವಿತೆಗಳನ್ನು ಬರೆದದ್ದು 1944ರಲ್ಲಿ. ಆ ಸಮಯದಲ್ಲಿ ನಮ್ಮನ್ನು ಕಾಡುತ್ತಿದ್ದ ರಾಷ್ಟ್ರೀಯತೆ, ಪ್ರಾಂತ್ಯ, ಸಂಸ್ಕೃತಿ, ರೆನೆಸಾನ್ಸ್‌ನ ಕಾಲದಲ್ಲಿದ್ದ ನಮಗೆ ಹಿಮ್ಮುಖವಾದ ಪ್ರಭಾವಗಳೇ ಹೆಚ್ಚಾಗಿ ಭಾಷೆ ಮತ್ತು ಸಂವಹನ ದೃಷ್ಟಿಯಿಂದ ನಾವು 'ರಮ್ಯ'ದ ಹಾದಿ ತುಳಿದಿದ್ದೆವು.

ನನಗೆ ಕಾವ್ಯ ರಚಿಸುವುದು ನನ್ನ ಸಂತೋಷಕ್ಕಾಗಿ ಮಾತ್ರವಾಗಿತ್ತು. ನಿಸರ್ಗ ವನ್ನು ನನ್ನ ಕವನಗಳಲ್ಲಿ ಹಿಡಿದಿಡಲು ಪ್ರಯತ್ನಿಸುತ್ತಿದ್ದೆ. ಆಗಿನ ಕವನಗಳಲ್ಲಿ ತುಯ್ದಾಟ ಹೊಯ್ದಾಟ ಇದೆ. ನನ್ನ ಪ್ರಾರಂಭದ ದಿನಗಳ ಕಾವ್ಯ ನಿರರ್ಥಕ ವಾದದ್ದು ಎನಿಸಲು ಪ್ರಾರಂಭಿಸಿದೆ. ಸಜೀವವಾದ ಕಾವ್ಯ, ನಿಜವಾದ ಕಾವ್ಯ ನಾನು ಈಗ ಬರೆಯಲು ಪ್ರಯತ್ನಿಸುತ್ತಿರುವುದು ಹಿಂದಿನವು ನನ್ನ Transitional Periodನ ಕವಿತೆಗಳು. ಹಿಂದಿನ ಕವನಗಳಲ್ಲಿ ಮನೆ ಮಾಡಿದ್ದ ಅದೃಶ್ಯ ಶಕ್ತಿಗಳು ಮಾಯವಾಗಿ ಇಂದಿನ ಸಜೀವ ಜೀವನದ ಸುಖ ದುಃಖಗಳು ಮೂಡಿವೆ.

**ಮೋಹನ್ :** ರಾಮಚಂದ್ರಶರ್ಮರಿಗೆ ನೀವು ಮುನ್ನುಡಿ ಬರೆದದ್ದು 1952ರಲ್ಲಿ. ಆದರೆ 1982ರಲ್ಲಿ ಪ್ರಕಟವಾದ 'ಬೆಳ್ಳಕ್ಕಿಗಳು' ಸಂಕಲನದಲ್ಲಿಯೂ ಅಂತರ ಕಾಣುತ್ತದೆಯಲ್ಲ. 'ಬೆಳ್ಳಕ್ಕಿಗಳು' ನೀವು ನಡೆದು ಬಂದ ಕ್ಷೇತ್ರಗಳ ಕೊಲಾಜ್ ನಂತಿದೆ ಅಲ್ಲವೆ ?

**ಎಕ್ಕುಂಡಿ :** ಬೆಳ್ಳಕ್ಕಿಗಳು 82ರಲ್ಲಿ ಪ್ರಕಟವಾದರೂ ಸಹ ನಾನು ಅಲ್ಲಿಯ ಕವನ ಗಳನ್ನು ಬರೆದದ್ದು 30-35 ವರ್ಷಗಳ ಹಿಂದೆ, ನನ್ನ ಕವನಗಳು ಜನಕರಾಜ ನಲ್ಲಿಯ ಶಿವಧನುಸ್ಸಿನಂತೆ ಬಿದ್ದಿತ್ತು. ಆದರೆ ಅದನ್ನೆತ್ತುವ ದಶಕಂಠರಾಗಲಿ, ದಾಶರಥಿಗಳಾಗಲಿ ಇರಲಿಲ್ಲವಾದ್ದರಿಂದ ನಂತರ ಯಾವಾಗಲೋ ಅದು ಬೆಳಕನ್ನು ಕಂಡಾಗ ಅಂತರವಿದೆ ಅನಿಸುತ್ತದೆ. ಆದರೆ 'ಪ್ರತಿಬಿಂಬಗಳು' ಕವನ ಸಂಕಲನ ದಲ್ಲಿ ನನ್ನ ರಚನೆ ಮತ್ತು ವಿಚಾರಗಳು ಭಿನ್ನವಾಗಿಲ್ಲ.

**ಮೋಹನ್ :** ನಿಮ್ಮ ಕಾವ್ಯಕ್ಕೆ ಮಾರ್ಕ್ಸ್‌ವಾದ ಪ್ರೇರಕವಾಗುವಂತೆ ಮಾಧ್ವ ಸಿದ್ಧಾಂತವೂ ಪೂರಕವಾಗುತ್ತದೆ! ಎಂದು ಪತ್ರಿಕೆಗಳಲ್ಲಿ ಹೇಳಲಾಗಿದೆ. ಇದರ ಬಗ್ಗೆ ನಿಮ್ಮ ಅಭಿಪ್ರಾಯ ?

**ಎಕ್ಕುಂಡಿ :** ನಮಗೆ ಇಂದು ವಿಚಾರಗಳು ಬೇಕಾಗಿವೆ. ನಾವು ಮಾರ್ಕ್ಸ್‌ನನ್ನು ಪ್ರೀತಿಸುತ್ತೇವೆ ಎಂದರೆ ನಮ್ಮ ನೆಲದ ವಿಚಾರಗಳನ್ನು ನಿರಾಕರಿಸುತ್ತೇವೆ ಎಂದಲ್ಲ. ನಮ್ಮ ದೇಶಕ್ಕೆ ಚಿಂತಕರು, ವಿಚಾರಿಗಳು ಬೇಕು. ಅವರಲ್ಲಿನ ಉತ್ತಮ ವಿಚಾರ ಗಳನ್ನು ಮಾತ್ರ ಸ್ವೀಕರಿಸಬೇಕು. ಮಧ್ವಾಚಾರ್ಯರಾಗಲಿ, ಬಸವಣ್ಣನವರಾಗಲಿ, ಶಂಕರಾಚಾರ್ಯರಾಗಲಿ ಒಂದು ಕಾಲ ಘಟ್ಟಕ್ಕೆ ಸೇರಿದವರು ಗೀತಾಪಾಠ ದೇವರಿಗೆ ನಾವು ಸಲ್ಲಿಸಬಹುದಾದ ಅತ್ಯುತ್ತಮ ಸೇವೆ ಎಂದರೆ ನಾನಾ ಜನರ ಸೇವೆ ಎನ್ನುತ್ತದೆ. ನಮ್ಮ ಗೀತೆಯುಲ್ಲಾಗಲಿ, ಮಧ್ವಾಚಾರ್ಯ, ಬಸವಣ್ಣನವರಲ್ಲಾಗಲಿ

ಅವರ ಪ್ರಗತಿಪರ ಆಲೋಚನೆಗಳನ್ನು, ಅಂಶಗಳನ್ನು ಮಾತ್ರ ಸ್ವೀಕರಿಸಬೇಕು. ನಾವು ನಿರಂತರವಾಗಿ ಮುಂದೆ ಹೋಗುವವರು. ನಮ್ಮ ಜೀವನ ಆ ಕಾಲಘಟ್ಟದ ಅವರ ವಿಚಾರಗಳ ಸ್ಥಗಿತತೆಯಲ್ಲ. ನಾವು ಆ ವಿಚಾರಗಳನ್ನೂ ಮೀರಿ ಮುಂದುವರೆಯುತ್ತೇವೆ. ಅನುಯಾಯಿಗಳನ್ನು ನೋಡಿ ನಾವು ಮತದ ಬಗ್ಗೆ ನಿರ್ಣಯ ನೀಡಬಾರದು. ಮತವನ್ನು ನೋಡಿ ಅನುಯಾಯಿಗಳನ್ನು ನಿರ್ಧರಿಸಬೇಕು. ಉದಾಹರಣೆಗೆ ಯೇಸು ಕ್ರಿಸ್ತ ಜಗತ್ತಿಗೆ ಪೂಜ್ಯನಾದವನು. ಆದರೆ, ಆತನ ಅನುಯಾಯಿಗಳೆಂದು ಕರೆದುಕೊಳ್ಳುವ ಕ್ರಿಶ್ಚಿಯನ್ನರು ಮಾಡಿದ್ದೇನು ? ಇಂದು ಜಗತ್ತಿನಲ್ಲಿ ಅವರು ಮಾಡಿದಷ್ಟು ಕೊಲೆಗಳನ್ನು ಯಾರೂ ಮಾಡಿಲ್ಲ. ಮನುಷ್ಯನನ್ನು ವಿಶಾಲಗೊಳಿಸುವ ಎಲ್ಲವನ್ನೂ ಸ್ವೀಕರಿಸಬೇಕು. ಸಂಕುಚಿತಗೊಳಿಸುವುದನ್ನು ಬಿಟ್ಟುಬಿಡಬೇಕು. ವಿಶಾಲಗೊಳಿಸುವುದು ಪ್ರಗತಿಪರ; ಸಂಕುಚಿತಗೊಳಿಸುವುದು ಪ್ರತಿಗಾಮಿ ಎಂದು ನಾನು ಭಾವಿಸಿದ್ದೇನೆ.

ಮೋಹನ್ : ಕವಿಯ ಪ್ರಜ್ಞೆಯ ಬೆಳವಣಿಗೆಯಲ್ಲಿ ಪರಿಸರ ಅತ್ಯಂತ ಪ್ರಭಾವಯುತವಾಗಿ ಕೆಲಸ ಮಾಡಿರುತ್ತದೆ ಎನ್ನುವಾಗ ನಿಮ್ಮ ಬೆಳವಣಿಗೆಯ ಹಿನ್ನೆಲೆಯಲ್ಲಿ ಪರಿಸರದ ಪ್ರಭಾವ ?

ಎಕ್ಕುಂಡಿ : ನಾನಿದ್ದುದು ಸಮುದ್ರತೀರ. ಮುಗ್ಧವಾದ, ಸುಸಂಸ್ಕೃತರಾದ ಒಕ್ಕಲಿಗರು, ಹಾಲಕ್ಕಿ ಒಕ್ಕಲಿಗರು ವಾರಕ್ಕೊಮ್ಮೆ ಗುಮಟೆ ಹಿಡಿದು, ಬೆಂಕಿ ಹಾಕಿ ಎಷ್ಟು ಒಳ್ಳೆಯ ಜಾನಪದ ಹಾಡುಗಳನ್ನು ಹಾಡುತ್ತಿದ್ದರು. ನಾನು ರಾತ್ರಿಯೆಲ್ಲಾ ಅವರ ಜೊತೆಯೇ ಕುಳಿತಿರ್ತಿದ್ದೆ. ನಿಸರ್ಗದ ಜೊತೆಯಲ್ಲಿ ಅವರ ನೋವು, ಹಾಡುಗಳು ಅಳಕ್ಕಿಳೀತು. ಈಗ ಎಲ್ಲಾ ಬಾಣಲೆಯಲ್ಲಿದೆ. ಹೆಚ್ಚು ಗಾಢವಾಗಿ ಕುದಿಯುವ ಹಂತದಲ್ಲಿದೆ. ಅಲ್ಲಿ ಹೊಸ ಕಾವ್ಯ ಹುಟ್ಟುತ್ತದೆ. ಗುಮಟೆ ಪದಗಳು ಅದರ ಹಿಂದೆ ಕೆಲಸ ಮಾಡುತ್ತದೆ. ಟೆನ್ನಿಸನ್ ಹೇಳ್ತಾನೆ—

Old order changeth
It will influence to new

ಪ್ರತಿಯೊಂದು ಹಳೆಯದೂ ತಾನು ಹೋಗೋ ಮುಂಚೆ ಹೊಸತಕ್ಕೆ ಬೀಜ ಬಿತ್ತಿ ಹೋಗುತಾವೆ. ಈ ಸೃಷ್ಟಿಕ್ರಿಯೇನೇ ಹಾಗೆ. ನಮ್ಮ ಅನುಭವ, ಪರಂಪರೆಗಳು ಹೆಚ್ಚು ಹೆಚ್ಚು ಪ್ರಗತಿಪರ ಧೋರಣೆಗೆ ಅವಕಾಶ ಮಾಡಿಕೊಡುತ್ತವೆ.

ಮೋಹನ : ನೀವು ಸಮುದ್ರತೀರ, ಬೆಳ್ಳಕ್ಕಿಗಳ ಮಧ್ಯದಿಂದ ಬಂದವರು. ಪ್ರಕೃತಿಗೆ ತೆರೆದುಕೊಳ್ಳುವ ಮುಗ್ಧತೆಗಳಿಗೆ ಹಸಿವು ಮಾರಕವಾಗುತ್ತದೆ ಅಂತ 'ಮನವ ಕಾಡುತಿದೆ' ಸಂದರ್ಶನದಲ್ಲಿ ಹೇಳಿದ್ದೀರಿ.

ಎಕ್ಕುಂಡಿ : ಹೌದು. ನಿಸರ್ಗ ಎನ್ನುವುದು 'ಬೆಳ್ಳಕ್ಕಿ'ಯ ಹಾಗೆ. ಹೊಳೆ, ನೀರು, ಗದ್ದೆ, ಹಸುರು ನೋಡಿ ಖುಷಿ ಪಡ್ತಾ ಇದ್ದಂತೆ ಅದರ ಬೆನ್ನಿನಲ್ಲಿ

‘ ಗಂಜಿ ’ ಸಮಸ್ಯೆ ಕಾಡ್ತಾ ಇರುತ್ತೆ. ಗಂಜಿಗಾಗಿ ಹೋರಾಟ ಹೆಚ್ಚಿದಂತೆ ನಿಸರ್ಗ ಅವರಿಂದ ಮರೆಯಾಗುತ್ತಾ ಹೋಗುತ್ತೆ. ಗಂಜಿ ಜೀವನಕ್ಕೆ ಎಷ್ಟು ಅಗತ್ಯವೋ ಅಷ್ಟೇ ಬೆಳ್ಳಕ್ಕಿಗಳೂ ಅವಶ್ಯಕ ಎನ್ನುವ ಒಂದು ಸಮಾಜ ಸೃಷ್ಟಿ ಆಗಬೇಕು. ಪ್ರತಿಯೊಂದು ಮುಗ್ಧ ಮನಸ್ಸಿನಲ್ಲಿ, ಎದೆಯಲ್ಲಿ ಒಂದೊಂದು ಬೆಳ್ಳಕ್ಕಿ ಇರುತ್ತದೆ. ಬೆಳ್ಳಕ್ಕಿ ದವಲತೆಗೆ, ಶುದ್ಧತೆಗೆ ಸಂಕೇತವಾದಂತೆ ಸೌಂದರ್ಯದ ಸಂಕೇತ ಕೂಡ. ಈ ಜೀವನ ಪ್ರೀತಿ ಮನುಷ್ಯನ್ನ ಸಂಪೂರ್ಣ ಮಾಡುತ್ತೆ ಇಲ್ಲದಿದ್ದರೆ ಅವನಿಗೆ ಮಾನವ ಸಂಬಂಧಗಳ ಬಗ್ಗೆ ಅರ್ಥವೇ ಆಗೋದಿಲ್ಲ. ಶೇಕ್ಸ್‌ಪಿಯರ್‌ನ ಹ್ಯಾಮ್ಲೆಟ್ ನಾಟಕದಲ್ಲಿ ಯೆಕೂಬಾ ಸನ್ನಿವೇಶ ನೋಡ್ತಾ ಹಳ್ಳಿಯವ ಬಿಕ್ಕಿ ಬಿಕ್ಕಿ ಅತ್ತನಂತೆ. ಆಗ ಶೇಕ್ಸ್‌ಪಿಯರ್ ಹೇಳ್ತಾನೆ. ‘ Who is he to yekuba and yekuba to him ’ ನಮಗೆ ನಮ್ಮ ಮತ್ತು ಇತರರ ನಡುವೆ ಬಂಧಿಸುವ ಸೂಕ್ಷ್ಮವಾದ ಎಳೆಗಳು ಇರುತ್ತೆ. ಕೆಲವು ಕಾಡುತ್ತೆ ಕೆಲವು ಕಾಡೋಲ್ಲ. ಮನುಷ್ಯ ಕನಸುಗಳನ್ನು ಹೊಂದಿರಬೇಕು. ಅವು ಸಫಲವಾಗಲಿ, ವಿಫಲವಾಗಲಿ ಕನಸುಗಳು ಜೀವನವನ್ನು ಶ್ರೀಮಂತಗೊಳಿಸುತ್ತಾವೆ. ಚೆಗೆವಾರನಂಥ ಕನಸುಗಾರ ಕ್ರಾಂತಿಗೆ ಕಾರಣನಾದ. ನಿಜವಾದ ಕ್ರಾಂತಿ ಕನಸುಗಾರರಲ್ಲದವರಿಂದ ಸಾಧ್ಯವಿಲ್ಲ. ಕ್ರಾಂತಿಗೂ, ಕನಸಿಗೂ ನಿಕಟವಾದ, ಗಾಢವಾದ ಸಂಬಂಧವಿದೆ. ನಾವೆಲ್ಲ ಕನಸುಗಳನ್ನು ಹೊತ್ತವರು. ಈಗಲೂ ಬೆಂಗಳೂರಿನಲ್ಲಿ ವಿಮಾನ ಹಾರಿದರೆ ನನಗೆ ನಮ್ಮ ಗದ್ದೆಗಳ ಮಧ್ಯದಿಂದ ರೆಕ್ಕೆ ಬಡಿದು ಹಾರುವ ಬೆಳ್ಳಕ್ಕಿಗಳು ಜ್ಞಾಪಕಕ್ಕೆ ಬರ್ತಾವೆ. ಮನಸ್ಸಿನಲ್ಲಿ ಯಾವುದೋ ಲಯ, ಕಂಪನಗಳು ಉಂಟಾಗುತ್ತೆ.

**ಮೋಹನ್ :** ‘ ಲಯ ’ ನಿಮ್ಮ ಎಲ್ಲಾ ಕವನಗಳ ಪ್ರಧಾನ ಅಂಶ. ನಿಮ್ಮ ಶಬ್ದ ಸಂಪತ್ತಿನ ಜೊತೆಯಲ್ಲಿಯೇ ‘ ಲಯ ’ ಕವನಗಳ ಮೆರುಗನ್ನು ಹೆಚ್ಚಿಸಿದೆ. ಆದರೆ ಈ ಲಯವೇ ಹಲವು ಕವನಗಳಲ್ಲಿ ತೊಡಕಾಗಿದೆ ಎನಿಸುವುದಿಲ್ಲವೆ ? ಉದಾಹರಣೆಗೆ ಈಚಿನ ಹವಾಡ, ಚಪ್ಪಲಿಗಳನ್ನು ಕದ್ದವನಿಗೆ....

**ಎಕ್ಕುಂಡಿ :** ನನಗೆ ಸೋವಿಯತ್ ಕವನಗಳನ್ನು ಓದಿದ ಮೇಲೆ ಮುಕ್ತವಾದ ಛಂದಸ್ಸಿನಲ್ಲಿ ಪ್ರಯೋಗ ಮಾಡ್ಬೇಕು ಅನ್ನಿಸ್ತು. ಆದರೆ ಈಗ ನನ್ನ ಭಯ ಇರೋದು ಅದರಲ್ಲಿ ನನಗೆ ಸಾಮರ್ಥ್ಯ ಇಲ್ಲಾ ಅಂತ. ಲಯದ ಬಗ್ಗೆ ಬೇಕಾದ ಸ್ಪಷ್ಟವಾದ ಕಲ್ಪನೆ ಇಲ್ಲವಾದ ಕಾರಣ ಈಗ ಗೊತ್ತಿರುವ ಲಯವನ್ನೇ ಬಳಸಿ ಪ್ರಯೋಗ ಮಾಡ್ತಾ ಇದೇನೆ.

**ಮೋಹನ್ :** ‘ ವಸ್ತು ’ ತನ್ನ ‘ ರೀತಿ ’ಯನ್ನು ನಿರ್ಧರಿಸುತ್ತದೆ ಅನ್ನುವಾಗ ನಿಮ್ಮ ಆ ಕವನಗಳು....

ಎಕ್ಕುಂಡಿ : ಹೌದು, ಆ ಮಟ್ಟಿಗೆ ನಾನು failur ಆಗಿದ್ದೇನೆ. ವಸ್ತು ಮತ್ತು ರೀತಿಗಳ ನಡುವೆ ಹೊಂದಾಣಿಕೆ ಇರಬೇಕು. ನನ್ನ ಅಂತಹ ಕವನಗಳು ಅಯಶಸ್ವಿಯಾಗಿದೆ. ಅಂದ್ರೆ ಆ ರೀತಿಯಲ್ಲಿ ಬರೆಯುವ confidence ಇಲ್ಲವಾದ್ದರಿಂದ ಅಂತ ವಿಷಯಗಳ ಬಗ್ಗೆ ಬರೆಯುವುದು ನಿಲ್ಲಿಸಿದೆ.

ಮೋಹನ್ : ಅಂದ್ರೆ ನಿಮ್ಮ formನಿಂದಾಗಿ ವಸ್ತು ಬೇರೆ ಆಗ್ತಾ ಇದೆಯಾ !

ಎಕ್ಕುಂಡಿ : ಇಲ್ಲ. ರೀತಿ ಹಳತಾಗಿದ್ದು ವಸ್ತು ಹೊಸದಾಗಿದ್ದರೆ ಅಥವಾ ವಸ್ತು ಹಳತಾಗಿದ್ದು ರೀತಿ ಹೊಸದಾಗಿದ್ರೆ ಈ ಎರಡೂ ಒಂದು ರೀತಿ ಹೊಂದಾಣಿಕೆ ಇಲ್ಲದೆ ಬಳಲ್ತಾವೆ. ಈ ನಡುವೆ ನನ್ನ ಕವನಗಳಲ್ಲಿ ವಸ್ತು ಮುಂದೆ ಆಗೋದ್ರಿಂದ ಲಯ ಹಿಂದೆ ಬೀಳ್ತಾ ಇದೆ. ಆದರೂ ಪ್ರಯೋಗ ನಡೆಸ್ತಾ ಇದ್ದೇನೆ.

ಮೋಹನ್ : ನಿಮ್ಮ ಮುಂದಿನ ಪ್ರಯೋಗಗಳು ?

ಎಕ್ಕುಂಡಿ : ಹೊಸ ರೀತಿಯ, ಭಿನ್ನ ವಸ್ತುವಿನ ಕವಿತೆಗಳು. ಯಾವುದು ಹೊಸದು ಅದು ಸುಂದರವಾಗಿರುತ್ತದೆ. ಅದು ಸಫಲವಾಗಲಿ, ವಿಫಲವಾಗಲಿ ಸೃಷ್ಟಿ ಕ್ಷೇತ್ರದಲ್ಲಿ ಸಾಹಿತ್ಯ, ಕಾವ್ಯ ಕ್ಷೇತ್ರದಲ್ಲಿ ಹೊಸತನ್ನು ನೀಡಬೇಕು ಎಂಬ ಆಸೆ ಇದೆ. ' ಚೆಗೆವಾರ ', ಮಾರ್ಕ್ಸ್‌ರ ಜೀವನದ ಘಟನೆಗಳು ನನ್ನ ಆ ರೀತಿಯ ರಚನೆ. ' ಚೆಗೆವಾರ 'ನ ಕಾವ್ಯ ಮತ್ತು ಕ್ರಾಂತಿಯ ಪ್ರೇಮ ನನ್ನನ್ನು ಬಹಳವಾಗಿ ಕಾಡಿದೆ. ಆತ ಹೋರಾಟ ನಡೆಯಬೇಕಾದರೆ ಜೇಬಿನ ಚೀಲದಲ್ಲಿ ಇಟ್ಟುಕೊಂಡಿದ್ದು ಕೋವಿ, ಬ್ರೆಡ್ ಚೂರು ! ಜೊತೆಯಲ್ಲಿ ಪ್ಯಾಬ್ಲೋ ನೆರೂಡಾನ ಕಾವ್ಯ. ಅದರ ಜೊತೆಯಲ್ಲಿಯೇ ಲಿಯೋನಾಡ್ ಬ್ರೆಜ್ನೇವ್‌ರವರ ಆತ್ಮಚರಿತ್ರೆ. ' ಸೈರನ್ ' ಕನ್ನಡಕ್ಕೆ ಅನುವಾದ ಮಾಡುತ್ತಿದ್ದೇನೆ. ಫ್ಯಾಕ್ಟರಿಯ ಆ ' ಸಿಳ್ಳು ' ಇಡೀ ದುಡಿಯುವ ವರ್ಗದ ಸಂಕೇತವಾಗಿದೆ. ವಿಶ್ವ ಕಾರ್ಮಿಕರಿಗೆಲ್ಲಾ ಪರಿಚಿತವಾಗಿರುವ ದುಡಿಮೆಯ ಅದೇ ಸಮಯದಲ್ಲಿ ಮಾಲೀಕರ ಶೋಷಣೆಯನ್ನು ಪ್ರತಿನಿಧಿಸುವ ಈ ' ಸಿಳ್ಳು ' ಅತ್ಯಂತ ರೋಚಕವಾದ ಆತ್ಮಚರಿತ್ರೆ.

ಮೋಹನ್ : ನಮ್ಮ ಕಾವ್ಯ ಪಡೆದುಕೊಳ್ಳಬಹುದಾದ ಮುಂದಿನ ತಿರುವುಗಳು....

ಎಕ್ಕುಂಡಿ : ನಮ್ಮ ಕಾವ್ಯ ಖಂಡಿತಾ ಹೊಸ ತಿರುವು ಪಡೆಯುತ್ತದೆ. ಎಚ್. ಎಸ್. ಶಿವಪ್ರಕಾಶ್ ಎಲ್ಲರಿಗಿಂತ ಭಿನ್ನವಾಗಿ ಬರೆಯುತ್ತಿರುವ ಕವಿ. ಭಿನ್ನತೆ ಅಂದರೆ ವಸ್ತುವಿನಲ್ಲಿ ಮಾತ್ರವಲ್ಲ. ಸಂವಹನದಲ್ಲಿ, ದ್ರವ್ಯದಲ್ಲಿ, ಸತ್ವದಲ್ಲಿ ಅವರ ಕಾವ್ಯ ಈಗಿನ ಚಿಂತನೆ ಕಾಳಜಿಗಳದ್ದು ಒಳಗೊಂಡು ಒಂದು ವಿಶಿಷ್ಟವಾದ ದಾರಿಯಲ್ಲಿ ಸಂಗ್ರಹವಾಗಿ, ಪುಷ್ಟಿಗೊಂಡು ಸತ್ವಯುತವಾಗಿ ಬರುತ್ತಿದೆ. ನವ್ಯದ ನಂತರ ಅಕಡೆಮಿಕ್ ಕಾವ್ಯ ಹುಟ್ಟುತ್ತದೆ ಎಂದುಕೊಂಡಿದ್ದಾಗ ಜನಪದ ಸತ್ವವನ್ನು

ಉತ್ತಮ ಅಂಶಗಳೊಂದಿಗೆ ಶಿವಪ್ರಕಾಶ್ ತಮ್ಮ ರಚನೆಯಲ್ಲಿ ತಂದಿದ್ದಾರೆ. ಅವರು ಯಾಕೆ ವಿಶಿಷ್ಟ, ಭಿನ್ನ ಅನಿಸುತ್ತಾರೆ ಅಂದರೆ ಜನಪದದಲ್ಲಿ, ಜನಜೀವನದಲ್ಲಿ ಅವರ ಕಾವ್ಯಗಳು ಬೇರುಬಿಟ್ಟವೆ. ವಿಶಾಲ, ಪ್ರಗತಿಪರ ಆಶಯಗಳನ್ನು ಹೊಂದಿವೆ. ಅದರಿಂದ ಕೇವಲ ಸಂವಹನ ಮಾತ್ರ ಕಾವ್ಯದ ಗುಣವಾಗಿಲ್ಲ ಅದರ ಜೊತೆ ಸಂವೇದನೆ ಕೂಡ ಕೆಲಸ ಮಾಡಿದೆ. 'ಸಂವೇದನೆ ಉಳ್ಳ ಕಾವ್ಯ ಹೆಚ್ಚು ಜನರನ್ನ ತಲುಪುತ್ತದೆ. ಕಾವ್ಯ ಒತ್ತಡಗಳಿಂದ ಹುಟ್ಟುವುದಿಲ್ಲ. ಆದಕ್ಕೆ ಯಾವ ಭಯವೂ ಇಲ್ಲ' ಎಂದ ತಕ್ಷಣವೇ ಅವರ ಕವನದ ಕೆಲವು ಸಾಲುಗಳು ತಲೆಯಲ್ಲಿ ಹಾದು ಹೋದವು.

ತುಂಬಿರುವ ಹೊಳೆಯ ಬದಿಯಲ್ಲಿ ನಿಂತಿದೆ ಬಂಡೆ
ಕಲ್ಲಾಗಿ ಕುಳಿತಿರುವ ಕನಸಿನಂತೆ
ಅಲ್ಲೊಬ್ಬ ಹುಡುಗ, ಅಲ್ಲಲ್ಲಿ ಕಿವಿಯೊಡ್ಡಿದನು
ಒಳಗೆಲ್ಲಿಯೋ ಶ್ರುತಿಯ ಹುಡುಕಿದಂತೆ
ಮೌನಗಳ ಮಡುವಿನಲಿ ಮಾತುಗಳು ಇಳಿದಂತೆ
ಮೀನು ಮೈತೊಳೆದಂತೆ, ಅಲೆಯ ಧ್ವನಿಗೆ
ಆಲಿಸುತ ಸುತ್ತಿರುವ ಬೆಳ್ಳಕ್ಕಿಗಳ ಹಾಗೆ
ಹುಡುಗ ಆಲಿಸಿದನು : ಬಂಡೆಯೊಳಗೆ
ಬೆಸ್ತ ಅಂದನು 'ಮಗೂ ಭಯವೆನಿಸದೆ ನಿನಗೆ
ಅಲ್ಲೇನು ಆಲಿಸುವೆ ಬೆಟ್ಟದಲ್ಲಿ ?'
ನಸುನಕ್ಕು ಹುಡುಗ ಹೇಳಿದನು : ಎಲ್ಲಾದರೂ
ಭಯವುಂಟೆ ಹಾಡುಗಳು ಹುಟ್ಟುವಲ್ಲಿ.

(ಬಂಡೆ, ಹುಡುಗ ಮತ್ತು ಬೆಸ್ತ)

ಕೀಟ್ಸ್ ಕವಿಯ ಪ್ರಗಾಥಗಳಿಂದ ಪ್ರಭಾವಿತರಾದ ಎಕ್ಕುಂಡಿಯವರಿಗೆ ಕಾಡಿದ್ದು ಸೌಂದರ್ಯ ಸಾರುವ ಗ್ರೀಕ್ ಕುಂಭದಂತೆಯೇ ಪ್ರೊಮೀಥಿಯಸ್ ಕೂಡ. ಒಳಗೆಲ್ಲಾ ಬೂದಿ ಹೊತ್ತು ಹೊರಗೆ ಶೃಂಗಾರ ಲಹರಿ ತೆರೆದಿಡುವ ಕುಂಭದ ಬದುಕು, ಸಾವಿನ ಸಂಕೇತಗಳ ಜೊತೆಯಲ್ಲಿಯೇ ಬೆಂಕಿ ತರುವ ಪ್ರೊಮೀಥಿಯಸ್, ಸಾವಿರಾರು ಜನರಿಗಾಗಿ ಕಾವ್ಯ ರಚಿಸಿ ಅವರ ಮುಂದೆ ಹಾಡಿದ ಮಾಯಕೋವ್‌ಸ್ಕಿ, ಬೆಟ್ಟಗಳಲ್ಲಿ ಕನಸ ಹೊತ್ತು ಕ್ರಾಂತಿ ನಡೆಸಿ ಚೆಗೆವಾರ, ಬೆಂಗಳೂರಿನ ಬೃಹತ್ ಕಟ್ಟಡಗಳ ಮೇಲೆ ಹಾರುವ ವಿಮಾನ ಬೆಳ್ಳಕ್ಕಿ, ಸಮುದ್ರತೀರದ ಗುಮಟೆಗಳು, ಭಾಗವತರ ಹಾಡುಗಳು, ಕೀರ್ತನೆಗಳ ಜೊತೆಯಲ್ಲಿ ಕಿರಿಯರ ಕವನಗಳಿಂದಲೂ ಕಲಿಯ ಬಯಸುವ ಉತ್ಸಾಹ ಅವರನ್ನು ವಿಮರ್ಶೆಯ ಮಾನದಂಡಕ್ಕಿಂತ ಎತ್ತರ ಎತ್ತರ ಬೆಳೆಸುತ್ತದೆ.

—

# ವರ್ಷದಾರಂಭ

* ಹೆಚ್. ಸಿ. ಸೋಮಶೇಖರ್

೧

ಸುಡುವ
ಸೂರ್ಯನಿಗೂ
ತಂಬೆಲರಿನ
ತಂಪು

೨

ವಾಹನಗಳ
ದಟ್ಟ ಕಪ್ಪು
ಹೊಗೆಯು
ತೂರಿ ಬಂದ
ಜನರ ಕೈಯಲ್ಲಿ
ಹಸಿರ ಸೊಪ್ಪು

೩

ಬೇಸಿಗೆಯ ನಡು
ಮಧ್ಯಾಹ್ನದ
ಸೆಕೆಯು ಬೆಲೆ
ಮುಖದಲ್ಲಿ
ಧಾರಾಕಾರವಾಗಿ
ಬೆವರಿಳಿಸುತ್ತಿದ್ದರೂ
ಏನೋ ಸಂಭ್ರಮದಾನಂದ !
ಅರೆ ಹೊಟ್ಟೆಯು ಅಪ್ಪ ಜೆಪ್ಪು

೪

ಹೊಸಬಟ್ಟೆಗಾಗಿ
ಮುಷ್ಕರ ಹೂಡಿ
ಅಪ್ಪ ನ್ಮೈ ಪರಚಿಕೊಳ್ಳಲು
ಅಮ್ಮನೊಡನೆ ಜಗಳವಾಡಲು
ಕಾರಣವಾದ
ಚಿಳ್ಳೆಪಿಳ್ಳೆಗಳು
ಪಾಪ !
ಅತ್ತೂ ಅತ್ತೂ ಸುಸ್ತು.

೫

ಯಾವುದೋ
ಸುಖದ ನಿರೀಕ್ಷೆ
ಏನೇನೋ
ಆಸೆಯ ಹೊಸೆತ
‘ ಎಲ್ಲಾ.... ಈ.... ಈ....
ಹೊಸ ವರ್ಷದಲ್ಲಾದರೂ....
ದೇವಾ....’
ಕೈಗೂಡಬಾರದೇ ?

ಇಂದು
ಹೊಸ ವರ್ಷದಾರಂಭ
ಯುಗಾದಿ.

# ಸಂಕ್ರಾಂತಿ ಹುಡುಗಿಗೆ

* ಅಬ್ದುಲ್ ರಶೀದ್

ಪ್ರೀತಿಯ ಸಂಕ್ರಾತಿ,
ನೀನು ಹುಡುಗಿಗೆ ಹಸಿರು,
ಮೈ ತುಂಬ ನವಿರು
ಎದೆ ತುಂಬಿ ಜಗಿದಾಡುವ
ಪುಟ್ಟ ಮೊಲೆಗಳ ಕೊಟ್ಟೆ ;
ಕೆನ್ನೆಗೆ ಕೆಂಪು,
ಕಣ್ಣಿಗೆ ಮಿಂಚು, ತುಟಿ
ತುಂಬಿ ಬಿಂದಾಡುವ ಕನಸುಗಳ ಕೊಟ್ಟೆ.
ನನಗೆ ತಂಗಾಳಿಯು, ನಡಿಗೆಗೆ
ನವಿಲನ್ನ, ನಡುವಿಗೆ
ತೊನೆಯುವ ಖುಷಿಯನ್ನು ಕೊಟ್ಟೆ.

ಹುಡುಗಿಯ ಕನಸಿಗೆ ಮುಗಿಲನ್ನ,
ನೋಟಕ್ಕೆ ಕಡಲನ್ನ,
ಓಡಾಡಲು ಈ ಕಪ್ಪು ನೆಲವನ್ನು ಕೊಟ್ಟೆ.
ಮಾವಿನ ಹೂವನ್ನ, ಹುಣಸೆಯ ಹುಳಿಯನ್ನ,
ಜಗಿದು ಕೊಯ್ಯಲು ಸೊಂಟಕ್ಕೆ
ಕಸುವನ್ನು ಕೊಟ್ಟೆ.
ಕನಸಲ್ಲಿ ನವಿಲು, ಗರಿ ತುಂಬ ಕಣ್ಣು
ಮೈತುಂಬ ತೊನೆಯುವ ಬಯಕೆಗಳ ಕೊಟ್ಟೆ.

ಹುಡುಗಿಗೆ ಹೂ ಬಿರಿಯುವ
ಬೆರಗನ್ನ, ಬದಲುವ ಋತುವನ್ನ,
ಹೊರಗಾಗುವ ದಿಗಿಲನ್ನ ಕೊಟ್ಟೆ.
ನೆಲದಲ್ಲಿ ಬೇರು, ಮುಖದಲ್ಲಿ ಹೂವು,
ಕನಸುಗಳ ಕಾಪಿಡುವ ಗರ್ಭವನ್ನ ಕೊಟ್ಟೆ.
ಹೊಟ್ಟೆಯೊಳಗಡೆ ಪುಟ್ಟ ಮಗುವಿನ

ಕಂಪನವನ್ನ, ಎದೆ ತುಂಬ ಹಾಲನ್ನ
ನಡುತುಂಬ ತೆನೆಯುವ ಬೀಜಗಳ ಕೊಟ್ಟೆ.
ಹೊಲ ತುಂಬಿ ಚಿಗಿಯುವ ಫಲವತ್ತು ಕೊಟ್ಟೆ.

ಸಂಕ್ರಾಂತೀ, ನೀ ಹುಡುಗನಿಗೆ ಏನೆಲ್ಲ ಕೊಟ್ಟೆ !
ನಿನ್ನ ಹುಡುಗಿಯನ್ನ, ಅವನ ದುಗುಡಕ್ಕೆ
ಅವಳ ನಗುವನ್ನ, ಬಾನ ತುಂಬಾ ಚುಕ್ಕಿಯನ್ನ
ಮತ್ತು
ಅವಳಂಥ ಕವಿತೆಯನ್ನು ಕೊಟ್ಟೆ.
ಸಂಕ್ರಾಂತಿ, ನೀ ನನಗೆ ಎಷ್ಟೆಲ್ಲ
ಕೊಟ್ಟೆ ! ಎಷ್ಟೆಲ್ಲ ಕೊಟ್ಟೆ.

## ಹಳದಿ ಚುಕ್ಕೆಗಳು

* ಸುಧೇಶ ಮಹಾನ್

ಬೆಳಕು ನಿಲ್ಲದ ಕಪ್ಪು ಮರೆಯಲ್ಲಿ
ಹಾಡೆಲ್ಲಿದೆ ಗೆಳೆಯಾ ?

ಸುಂದರವಾದ ಹಗಲ ಸೂರ್ಯನ
ಕಂಕುಳಡಿಯ ಕತ್ತಲಲ್ಲಿ ಪ್ರೀತಿ ಸಾಯುತ್ತಿದೆ
ಕಥೆ ಹುಟ್ಟುವ ಮೌನ ಮರೆಯಲ್ಲಿ
ಸದ್ದು ಮಾಡದೆ ಉರಗ ಸೇರುತ್ತಿದೆ

ರಸಿಕಾ, ಸೂರ್ಯಕಾಂತಿ ಹೂ ಮುಡಿದ
ಗೆಳತಿಯರೆಲ್ಲ ಬೋರಿ ಬಂದರಿನ ರೈಲು ಹೃದಯದಲ್ಲಿ
ತುಳುಕಾಡುತ್ತಾರೆ—
ಹಾಗೆ ತುಳುಕಾಡುವ ದೇಹಗಳಿಂದ (ದಿನವೂ)
ಪ್ರೇಮ ಉದುರುತ್ತದೆ
ಒಂದು ದಿನ....
ಗೆಳೆಯಾ, ಒಂದು ದಿನ ಹುಚ್ಚನಂತೆ ಎಲ್ಲವನ್ನೂ ಹೆಕ್ಕಿ
ಬಾಗಿಲ ಮುಚ್ಚಿ ಬೆಳಕ ಅಡಿಯಲ್ಲಿ ಪ್ರೇಮದ ಅಣುಗಳ
ಪರೀಕ್ಷಿಸುತ್ತೇನೆ....

! ಬಂಧನದ ಅವಸರದಿ ಚುಂಬಿಸಿದಾಗ
ಹಗಲ ಸೂರ್ಯ ಕಂಕುಳಡಿಗೆ ಕೈಜಾರಿದಾಗ
ಲಿಪ್ಸ್ಟಿಕ್ಕಿನ ರುಚಿ ಮಾತ್ರ
ಹಳದಿ ಚುಕ್ಕೆಗಳ ಹಾವಂತೆ ನೆನಪಾಗುತ್ತದೆ.

---

## ಹತ್ಯೆ

---

* ಮಮತಾ ಜಿ. ಸಾಗರ

ಚಿಕ್ಕೆ ಹೊಳೆವ ಆಕಾಶದ
ಹಾಸು ಹೊಕ್ಕಿನಿಂದ ಹೊರ ಬಂದ
ಮೋಡಗಳ ದಂಡು
ಗುಡುಗು ಸಿಡಿಲು ಮಿಂಚು !

ಬಾನ ಪ್ರಣಯ ಕಂಡು ಉನ್ಮಾದಗೊಂಡ
ಸಾಗರ,
ಕೊಚ್ಚಿಹೋದ ಬೆಸ್ತರ
ಗುಡಿಸಲುಗಳು ;
ಉಸುಕಿನ ಹಾಸಿಗೆಯ ಮೇಲೆ
ಮೈ ಚಾಚಿಕೊಂಡ ಹೆಣಗಳು.

ಕಾಲಕ್ರಮೇಣ
ಕೊಳೆತು, ನಾರಿ, ಗೊಬ್ಬರವಾಗಿ
ಅಲ್ಲಿ ಬೆಳೆದ ಪಾರ್ಥೇನಿಯಂ
ಬೀಜ ಸಿಡಿದು
ಅದರ ವಂಶ ವೃದ್ಧಿಸುತ್ತಿತ್ತು.
ದೂರದ ಎತ್ತರದ ಕಟ್ಟಡಕ್ಕೆ
ವಾಯುವಿಹಾರಕ್ಕೆಂದು ಬಂದ ರಾಜ
ಇದನ್ನೆಲ್ಲಾ ಕಂಡು ; ಪಾರ್ಥೇನಿಯಂ ಕಳೆಗೆ
ಬುಲ್ಡೋಜರ್ ಹೊಡೆಸಿ ; ಬೆಂಕಿ ಹಚ್ಚಿದಾಗ
ಆ ಸತ್ತ ಬೆಸ್ತರ ಸಂತಾನ
ಅಲ್ಲಿಗೇ ಮುಗಿಯಿತು.

# ಅವನ ನೆನಪು

* ಎಂ. ಸರಸ್ವತಿಗೌಡ

ನೆನಸಿದೆಲ್ಲ ನನ್ನದಾಗುವ ಮಾತು,
ಒಂದು ನೆನಪು.

ಉಸುಬಿನ ದಿಬ್ಬದ ಮೇಲೆ
ಬರೆದ ಚಿತ್ರ
ಬೆಳಗಾಗೆದ್ದು ಹಿಣುಕಿದಾಗ
ಎಲ್ಲವು ಮಸಕಾಗಿರುತ್ತೆ
ಕಲ್ಪನೆಗಳೆಲ್ಲ ಹುಸಿಗೋಡೆಗಳು
ಕನಸು ಕಾಯುವ ಕೆಲಸ ಕೊಟ್ಟಿತು.

ಕಣ್ಣುಗಳು ಹಸಿರು ಕೋಟೆ ನಡುವೆ
ರೆಕ್ಕೆ ಬಿಚ್ಚುತ್ತವೆ.

ನಿನ್ನೆವರೆಗೂ ಕರಕಲಾಗಿದ್ದ
ನೋವು ಕರಗಿ ಜಡತೆ ನೀಗಿತು.

ಚಿಪ್ಪು ಒಡೆದು ಮುತ್ತು ಚೆಲ್ಲಿತು
ಗಟ್ಟಿ ಮುತ್ತುಗಳು
ಮೂಗಿನ ತುಟಿಯು ನತ್ತಾಗಿ
ಗಾಳಿಯಲ್ಲಿ ಹಾರಿದವು.

ಪರಿಚಿತ ಹಗಲುಗಳು
ಕಾಲನ ಕಡಲಲ್ಲಿ ಕರಗಿದವು.

ಕಂಗುರಂಗಿನ ಮಳೆಬಿಲ್ಲು ಬೆರೆದವು
ನನ್ನ ಮೆಯ್ಯಲ್ಲಿ.

# ಹರೆಯದ ಎರಡು ಪದ್ಯಗಳು

* ಎಸ್. ಕೆ. ವಾಣಿ

೧. ತಾರುಣ್ಯ

ಎರಡೆಂಟು ಮೀರಿದ ಈ ತಾರುಣ್ಯಗಳು
ಅಯಸ್ಕಾಂತ ಗುಂಡುಗಳು ; ಮನ್ಮಥನ ತುಂಡುಗಳು
ಮಿಂಚಲ್ಲೇ ಕಣ್ಣು ಹೊಡೆದು
ಮಿಟುಕಿ ಮತ್ತೇರಿಸುತ್ತವೆ ; ನಕ್ಕು ಮರೆಯಾಗುತ್ತವೆ.
ಇಲ್ಲದ ನೆಪ ಹೂಡಿ ಕಾಣದ್ದನ್ನು ಬೇಕಾದ್ದನ್ನ
ಸಂದಿ ಗೊಂದಿಗಳಲ್ಲಿ ಸಂಭ್ರಮಿಸುತ್ತವೆ
ಹೃದಯಕ್ಕೇ ಲಗ್ಗೆ ಹಾಕಿ
ಚಂದ್ರನ ನಂಬಿ ಬದುಕ ಭ್ರಮಿಸಿ
ಅಭಿಮನ್ಯುವೋ, ಉತ್ತರನೋ ಆಗುತ್ತವೆ.

೨. ಒಂದು ಉತ್ತರ

ಹುಡುಗಾ,
ನಿನ್ನ ನೋಟಕ್ಕೆ ಮನದ ಪಾತರಗಿತ್ತಿಯ
ತೊನೆದಾಟ, ಹರೆಯದ ರೆಂಬೆಕೊಂಬೆಗಳಲ್ಲಿನ
ಅಳಿಲು ಹರಿಯುವಿಕೆ
ಕಣಕಣದಲ್ಲಿ ಘುಮ್ಮಕ್ಕಿ ಪ್ರವಹಿಸುವ
ಪುಳಕ, ಉನ್ಮತ್ತ ಭಾವನೆಗಳಿಂದ
ನಾ ಹೂವಿನ ಪಕಳೆಯಷ್ಟೇ—
ಹಗುರ.

---

## ನಾವಲ್ಲವೇ ಸ್ವಾಮಿ....

ಅನಕ್ಷರದ ಆಹುತಿಗೆ ಸಿಲುಕಿ ಅನಾದಿಗಳಾಗಿ
ಮೂಕ ಪಶುಗಳಂತೆ ದುಡಿದುಡಿದು
ಅಡಿಗಡಿಗೂ ಅಡ್ಡ ಬಿದ್ದು ಕುಳಿತಲ್ಲೇ
ಅರೆ ಜೀವವಾಗಿ ಬದುಕಲು ಒದ್ದಾಡಿದವರು ನಾವಲ್ಲವೇ
ಸ್ವಾಮಿ, ನಾವಲ್ಲವೆ....

—ಆಕ್ಕ್ಯಾಡು ರಾಮೇಗೌಡ

# ಯಾತನೆಗಳ ನಾಡಲ್ಲಿ

* ತಿಮ್ಮನಹಳ್ಳಿ ವೇಣುಗೋಪಾಲ್

ಗೆಳೆಯ,
ನಲವತ್ತೇಳರ ಸ್ವಾತಂತ್ರ್ಯಕ್ಕಾಗಿ ನೀ
ಚೆಲ್ಲಿದ ಹಾಡಿನಲ್ಲಿ ನಾ ಕೆರಳದಾಗ
ನಿನ್ನ ಬಂಧುಗಳೆಲ್ಲಾ ವಿಷ ಕಕ್ಕಿದ್ದು ಯಾಕೆ ಗೊತ್ತಾ ?
ಚಿಂದಿ ತೂತುಗಳಲ್ಲಿ ಇಣುಕುವ
ಬಂದೂಕದ ನಳಿಕೆಗಳು
ಕಣಗಿಲೆ ಗಿಡಗಳ ಹಕ್ಕಲಲ್ಲಿ
ಒಡೆಯುವ ನೋವಿನಾ ಸೆಲೆಗಳು
ಕತ್ತು ಹಿಚುಕಿದ ಹಕ್ಕಿಗಳು
ಹಾಡುವ ಮೌನ ಮಾತುಗಳು—
ಎಲ್ಲವೂ ಉಂಟು ಈ ನಾಡಲ್ಲಿ
ಕತ್ತರಿಸಿದ ಬೋಳುಕಾಡಲ್ಲಿ.
ಬಿಸಿಲಲ್ಲಿ ನಿಂತ ಗೋಡೆಗಳು
ಬದುಕಿನ ಪದರುಗಳನ್ನು ಬಿಚ್ಚಿ
ಬೆತ್ತಲಾಗುತ್ತವೆ.
ಸೈರನ್ನಿನ ರಾಕ್ಷಸ ಕೂಗಿನಲ್ಲಿ
ಕೊಳವೆಗಳ ಒಡಲಲ್ಲಿ ನೋವುಗಳು
ತೆವಳಲಾರದೆ ಹೆಪ್ಪುಗಟ್ಟುತ್ತವೆ.
ಕಡಲ ತಡಿಯಲ್ಲಿದ್ದ ಕಪ್ಪುಹೊಗೆಯಲ್ಲಿ
ಪ್ರೀತಿ ನೆಲಕಚ್ಚಿ ಗೋರಿಗಳು
ದಟ್ಟೈಸುತ್ತವೆ.
ಮಡಕೆಗಳ ಮರೆಯಲ್ಲಿ ಹುಟ್ಟುವ
ಕನಸುಗಳಿಗೆ ಕಪ್ಪಡರಿದಂಗ
ಶೋಕಗೀತೆಗಳು ರಕ್ತ ಚೆಲ್ಲಿ
ಶ್ಲೋಕಗಳು ರಾಗ ತುಂಬಿ
ತಮ್ಮ ಹಿರಿಮೆಯ ಮೆರೆಯುತ್ತವೆ.
ರಾಶಿ ಹೆಣಗಳ ಮೇಲೆ ಊರಿದ
ಅಂಡುಗಳು ಸಿಡಿದು ಚೂರಾಗುವಾಗ

ಗೋಸುಂಬೆಗಳಾಗಿದ್ದು
ಚಪ್ಪಡಿಗಳ ಮೇಲೆಳೆದು
ಮೀಸೆಯಂಚಿನಲಿ ಕೊಂಕುಗಳು ಸಾಲಿಟ್ಟಾಗ
ನಮ್ಮ ಪರಂಪರೆಯ ಇತಿಹಾಸಕ್ಕತ್ತಿದ ಕಜ್ಜಿ.
ಗೆಳೆಯ ನೀ ಕಂಠ ತುಂಬಿ ಹಾಡುತಿದ್ದ
'ನಮ್ಮ ನಾಡು ಭಾರತ ; ಭವ್ಯ ಬೀಡು ಭಾರತ'
—ಇದಕ್ಕೆ ಉತ್ತರ ಕೇಳುತ್ತಾ
ಇಂಡಿಯಾದ ಮೂಲೆ ಮೂಲೆ
ಅಲೆದಿದ್ದೇನೆ.

## ಕೆ. ಜಿ. ಎಫ್.*

—ಕೆ. ರಾಮಯ್ಯ

ಬಸಿರಲ್ಲಿ ಹೊನ್ನು ಹುದುಗಿಸಿಕೊಂಡ
ಈ ಕರಿದೊಗಲ ಹೆಣ್ಣು
ಎಲ್ಲ ಬಗೆಯ ವಿರೋಧಾಭಾಸಗಳ ಮೈವೆತ್ತು
ಆಂಗ್ಲ ಸತ್ತಿನ ಹರಾಮಿ ನಗೆಯಲ್ಲಿ
ನಿತ್ಯದ ಕ್ರೌರ್ಯ ಮರೆತು
ದಿನ ದೂಡುತ್ತಾಳೆ.

ಕರ್ನಾಟಕದಲಿ ಕಾಲೂರಿ
ಸದಾ ಮದ್ರಾಸಿನತ್ತ
ಕಿವಿನಿಮಿರಿಸಿ ನಿಂತ ಇವಳ ಮಜಭೂತು
ಮೈ ಮಾತ್ರ ಮಾರ್ವಾಡಿಗಳ ಸ್ವತ್ತು.
ಕಣ್ಣಲ್ಲಿ ಜಿಗಿಯುದಾಸೆಗಳು
ಎದೆಯಲ್ಲಿ ಅದುಮಿಟ್ಟ ಲಾವಾ
ಗಟ್ಟಿ ಇಲ್ಲದ ನಿಂತ ನೆಲ
ಇಂದಲ್ಲ ನಾಳೆ ಖಂಡಿತ
[illegible] ಪಾತಾಳ ಸೇರಿದರೆ.

* '[illegible]' ಸಂಕಲನದಿಂದ.

# ದಲಿತರ ಬಂಡಾಯ ಮನೋಧರ್ಮ : ಇತಿಹಾಸದ ಹೆಜ್ಜೆಗಳು

* ಮನಜ

ಈ ಲೇಖನದ ಸಂದರ್ಭದಲ್ಲಿ ಮೇಲಿನ ವಿಷಯವನ್ನು ಚರ್ಚಿಸುವಾಗ ಐತಿಹಾಸಿಕವಾಗಿ ಬಹು ಮುಖ್ಯವೆನಿಸುವ ಮೂರು ಅಂಶಗಳನ್ನು ವಿಶದ ಪಡಿಸಬಹುದೆಂದು ತೋರುತ್ತದೆ. 1. ಹನ್ನೆರಡನೆ ಶತಮಾನದ ಶರಣರ ಸಾಂಸ್ಕೃತಿಕ ಆಂದೋಲನವನ್ನು ಕಟ್ಟಿದ ದಲಿತರು. 2. ಶರಣರ ಆಂದೋಲನದ ಪ್ರಾಚೀನತೆ. ಹಾಗೂ ಕೊನೆಯದಾಗಿ 3. ಶರಣ ವ್ಯವಸ್ಥೆಯಲ್ಲಿ ಮಹಿಳೆ. ಇದೇ ಸಂದರ್ಭದಲ್ಲಿ ಇನ್ನೊಂದು ಸ್ಪಷ್ಟನೆಯೇನೆಂದರೆ, ಶರಣ ವ್ಯವಸ್ಥೆಯಲ್ಲಿ ಮಹಿಳೆ ಎಂಬ ಈ ಮೂರನೆ ಅಂಶವನ್ನು ವಿಶದ ಪಡಿಸುವಾಗ ಯಥಾಪ್ರಕಾರ ಮಹಿಳಾ ಸ್ವಾತಂತ್ರ್ಯದ ಬಗ್ಗೆ ಹೇಳಿಕೆಗಳನ್ನು ಉದ್ಧರಿಸುವ ಬದಲು ಸ್ವತಃ ಶರಣೆಯರ ಕೆಲವು ವಚನಗಳನ್ನೇ ವಿಶ್ಲೇಷಿಸುವುದು ಹೆಚ್ಚು ಅರ್ಥಪೂರ್ಣವೆಂದು ಭಾವಿಸಲಾಗಿದೆ.

ಹನ್ನೆರಡನೆ ಶತಮಾನದಲ್ಲಿ ಘಟಿಸಿಹೋದ ಶರಣರ ಸಾಮಾಜಿಕ ಧಾರ್ಮಿಕ ಆಂದೋಲನದ ಸಂಘಟಕರು ಹೊಲೆಮಾದಿಗರೇ ಮೊದಲಾದ ದಲಿತರೆಂಬುದು, ಇಂಡಿಯಾದ ಸಾಮಾಜಿಕ ಪರಿವರ್ತನೆಯ ಇತಿಹಾಸದಲ್ಲಿ ಅಲಿಖಿತವಾಗಿ ಹೂತು ಹೋಗಿ, ಬಹುಕಾಲದಿಂದಲೂ ಬೆಳಕು ಕಾಣದಿರುವ ಹಲವಾರು ನಿಗೂಢ ಸತ್ಯಗಳಲ್ಲಿ ಒಂದೆನಿಸುತ್ತದೆ. ಆ ಸತ್ಯ ಸಂಗತಿಯ ಈ ಸ್ಥಿತಿಗೆ ವೈದಿಕ ವ್ಯವಸ್ಥೆ ಎಷ್ಟರ ಮಟ್ಟಿಗೆ ಕಾರಣವೋ ಅಷ್ಟೇ ಮಟ್ಟಿಗೆ ಶರಣ ವ್ಯವಸ್ಥೆಯ ಅನಂತರ ಬೆಳವಣಿಗೆಯೂ ಕಾರಣವಾಗಿದೆಯೆಂಬುದನ್ನು ಅಲ್ಲಗಳೆಯಲು ಸಾಧ್ಯವಿರುವಂತಿಲ್ಲ. ಚನ್ನಯ್ಯ, ಕಕ್ಕಯ್ಯ ಮತ್ತು ಬಸವರೇ ಮುಂತಾದ ಶರಣ ಪ್ರಮುಖರಿಂದ ಅಪೂರ್ವವೂ ಮೌಲಿಕವೂ ಆದ ಚಾಲನೆಯನ್ನು ಪಡೆದು, ವೈದಿಕ ವ್ಯವಸ್ಥೆಯಲ್ಲಿ ಕಡೆಗಣಿತರಾಗಿದ್ದ ಬೆಸ್ತರು, ಬೇಡರು, ಗೊಲ್ಲರು, ಕುಂಬಾರರು, ಒಕ್ಕಲಿಗರು ಆಗಸರೇ ಮುಂತಾದ ದಲಿತವರ್ಗದ ಜನರನ್ನು ಅಪಾರ ಸಂಖ್ಯೆಯಲ್ಲಿ ತನ್ನತ್ತ ಸೆಳೆದುಕೊಂಡು, ಅತ್ಯಂತ ವ್ಯಾಪಕವೂ ಕ್ರಾಂತಿಕಾರವೂ ಎನಿಸುವ ವಿಚಾರಗಳೊಡನೆ ಮುನ್ನಡೆದ ಶರಣರ ಸಾಂಸ್ಕೃತಿಕ ಆಂದೋಲನ, ಹರಿಹರ ರಾಘವಾಂಕರ ಕಾಲಕ್ಕಾಗಲೇ ಅದು ಕೇವಲ ಒಂದು Sectarian movement ಆಗಿ ಮುರುಟಿಕೊಳ್ಳುತ್ತ ನಡೆದು ಬಂದಿದೆಯೆಂಬುದನ್ನು ಚರಿತ್ರೆಯಲ್ಲಿ ಕಾಣಬಹುದಾಗಿದೆ.

ಆದ್ದರಿಂದ, ಈ ಸಂದರ್ಭದಲ್ಲಿ, ಶರಣರ ಈ ಸಾಂಸ್ಕೃತಿಕ ಬಂಡಾಯದ ಸಂಘಟನೆಯಲ್ಲಿ ಕೇವಲ ಈ ಮೇಲೆ ತಿಳಿಸಿರುವ ದಲಿತ ವರ್ಗದ ಜನರೇ ಬಹು ಸಂಖ್ಯೆಯಲ್ಲಿರಲು

ಕಾರಣವೇನೆಂಬ ಪ್ರಶ್ನೆ ಬಹು ಮುಖ್ಯವೆನಿಸುತ್ತದೆ. ಅದಕ್ಕಿರುವ ಉತ್ತರವೂ ಅಷ್ಟೇ ವಾಸ್ತವವೂ ತರ್ಕಬದ್ಧವೂ ಆದುದಾಗಿದೆ. ಅದೆಂದರೆ, ಈ ಸಂಘಟನೆಯಲ್ಲಿ ದಲಿತ ವರ್ಗದ ಜನರೇ ಪ್ರಧಾನವಾಗಿ ಕಾಣಲಿಕ್ಕೆ ಕಾರಣ, ಒಂದೆಡೆ, ಅವರು ವೈದಿಕ ವ್ಯವಸ್ಥೆಯಿಂದ ಕಡೆಗಣಿಸಲ್ಪಟ್ಟವರು. ಇನ್ನೊಂದೆಡೆ, ವೈದಿಕ ಮೇಲು ಜಾತಿಯು ಮಂದಿ ತಮಗಿದ್ದ ಸ್ಥಾನಮಾನಗಳನ್ನು ಬಿಟ್ಟು ದಲಿತ ಜನವರ್ಗದ ಸಮಾನತೆಯನ್ನು ಒಪ್ಪಲು ಸಿದ್ಧರಿರದೆ ಹೋದುದು. ಈ ವಿಷಯದಲ್ಲಿ ಬಸವಣ್ಣ ಕೂಡ 'ನಾನು ಮೊದಲು ಕೀಳಾಗದೆ ಮೇಲಾಗಲೊಲ್ಲೆ' ನೆಂಬ ಮಾತನ್ನು ಅತ್ಯಂತ ಅರ್ಥಪೂರ್ಣ ವಾಗಿಯೂ, ತನ್ನ ಹೋರಾಟದ ಬದುಕನ್ನು ಮುನ್ನಡೆಸಿ ಶರಣ ಸಂಘಟನೆಯ ಪ್ರಧಾನಪುರುಷನೆನಿಸಿಕೊಳ್ಳಲು ಕಾರಣರಾದ ಕಕ್ಕಯ್ಯ ಚೆನ್ನಯ್ಯಾದಿಗಳನ್ನು, ತನ್ನ ನೂರಾರು ವಚನಗಳಲ್ಲಿ ಸ್ಮರಿಸಿಕೊಂಡಿರುವುದನ್ನೂ ಈ ಸಂದರ್ಭದಲ್ಲಿ ನೆನೆಯಬಹುದು. ಇನ್ನು ಈ ವಿಷಯದಲ್ಲಿ ಹರಿಹರನಂಥ ಕವಿಗಳನ್ನು ಅಧ್ಯಯನ ಮಾಡುವಾಗ ನೆನಪಿಡ ಬೇಕಾದ ಒಂದು ಮುಖ್ಯ ಸಂಗತಿಯೇನೆಂದರೆ, ಶರಣರ ಬದುಕನ್ನೇ ತಮ್ಮ ಕಾವ್ಯದ ವಸ್ತುವನ್ನಾಗಿ ಅಳವಡಿಸಿಕೊಂಡ ಧೋರಣೆಯನ್ನು ಸ್ವಲ್ಪ ಪಕ್ಕಕ್ಕೆ ಸರಿಸಿ, ಅಂದು ಬಸವನೊಡನೆ ಸಂಘಟಿತರಾದ ಶರಣರನ್ನೂ ಅವರ ವಚನಗಳನ್ನೂ ಅವರವರ ಸಾಮಾಜಿಕ ಧಾರ್ಮಿಕ ಹಿನ್ನೆಲೆಯ ಸ್ಪಷ್ಟವಾದ ಅರಿವಿನಿಂದ ಪರಿಶೀಲಿಸುವುದೇ ಯಥಾರ್ಥವೂ ತುಂಬಾ ಅರ್ಥಪೂರ್ಣವೂ ಆದುದೆಂಬುದರಲ್ಲಿ ಅನುಮಾನವಿದ್ದಂತಿಲ್ಲ. ಆದರೆ, ಹಾಗೆಂದ ಮಾತ್ರಕ್ಕೆ ಶರಣರ ಜೀವನದ ಬಹುತೇಕ ವಿವರಗಳು ದೊರೆಯುವುದು ಕೇವಲ ಹರಿಹರನ ಕಾವ್ಯಗಳಲ್ಲಿ ಮಾತ್ರವೆಂಬ ಮೂಲ ಸತ್ಯ ವನ್ನಾಗಲಿ ಅಥವಾ ಆ ಬಗೆಯ ಕಾವ್ಯಗಳ ನಂತರದ ಕವಿಗಳಿಗೆ ಪಾಲ್ಕುರಿಕೆ ಸೋಮ ಹಾಗೂ ಹರಿಹರರೇ ಮೂಲ ಆಕರಗಳೆಂಬ ಚರಿತ್ರೆಯ ವಾಸ್ತವ ಸತ್ಯವನ್ನಾಗಲಿ ಅಲ್ಲಗಳೆಯುವುದು ಈ ಮಾತಿನ ಅರ್ಥವಲ್ಲ. ಬದಲಾಗಿ, ಶರಣರ ಬಗೆಗಿನ ಎಷ್ಟೋ ವಿಚಾರಗಳಲ್ಲಿ ಹರಿಹರನ ಧೋರಣೆಯನ್ನು ಒಪ್ಪಲಿಕ್ಕೆ ಸಾಧ್ಯವಿರುವಂತಿಲ್ಲವೆಂಬುದನ್ನು ಸ್ವತಃ ವಚನಗಳ ವಿಶ್ಲೇಷಣೆಯಿಂದ ತಿಳಿಯಬಹುದಾಗಿದೆಯೆಂದು ಮಾತ್ರ ಇದರರ್ಥ. ಉದಾಹರಣೆಗೆ, ಹೊಲೆತನದ ಬಗೆಗಿನ ಹರಿಹರ ರಾಘವಾಂಕರ ಧೋರಣೆಯೊಡನೆ ಕೆಲವು ವಚನಗಳನ್ನು ಹೋಲಿಸಿ ಚರ್ಚಿಸಬಹುದು. ಚನ್ನಯ್ಯನನ್ನು ಕುರಿತ ಹರಿಹರನ ಒಂದು ರಗಳೆಯಲ್ಲಿನ ಒಂದು ಘಟನೆ ಈ ರೀತಿ ಇದೆ. ಚನ್ನಯ್ಯನ ಗುಪ್ತಭಕ್ತಿ ಶಿವನಿಂದಲೇ ಬಯಲಾಗಿ, ದೊರೆಯಾದ ಕರಿಕಾಲಚೋಳ ತನ್ನ ಅರಮನೆಯ ಕುದುರೆ ಲಾಯದ ನೌಕರನಾದ ಅಸ್ಪೃಶ್ಯ ಚನ್ನಯ್ಯ ಪರಮ ಶಿವಭಕ್ತ ನೆಂದರಿತು, ಅವನನ್ನು ಹುಡುಕುತ್ತ ಬಂದ ದೊರೆ ಚನ್ನಯ್ಯನ ಪಾದಗಳಿಗೆ ನಮಸ್ಕರಿಸುತ್ತಾನೆ. ಆಗ ಕವಿ ಹರಿಹರ ಚನ್ನಯ್ಯನ ಬಾಯಲ್ಲಿ ಆಡಿಸುವ ಮಾತನ್ನು ನೋಡಬೇಕು.

" ಏನಯ್ಯ ಚೋಳನೃಪ ನೀ ನಿಂತು ಒಪ್ಪರೆ ?
ಭಾನುಕುಲದರ್ಪಣನೆ ನೀ ನಿಂತು ಮಾಳ್ಪರೆ !
ಎನ್ನ ಕುಲವಂ ನೋಡದೆಯೆತ್ತಿಪ್ಪರೇ ಚೋಳ
ಎನ್ನ ಜಾತಿಯನರಿಯದಿಂತು ಮಾಳ್ಪರೇ ಚೋಳ[1] "

ಎನ್ನುತ್ತಾನೆ. ಅಂದರೆ, ಭಾನುಕುಲದರ್ಪಣನಾದ ನೀನು ಅಸ್ಪೃಶ್ಯನಾದ ನನ್ನ ಪಾದಗಳಿಗೆ ನಮಸ್ಕರಿಸಬಹುದೆ ಎಂದು ಕವಿ ಚನ್ನಯ್ಯನ ಬಾಯಲ್ಲಿ ಹೇಳಿಸಿದ್ದಾನೆ. ಹಾಗೆಯೇ ಹರಿಹರನ ಈ ಧೋರಣೆಯಲ್ಲಿ ಕ್ಷತ್ರಿಯ ಮೇಲು, ಅಸ್ಪೃಶ್ಯ ಕೀಳೆಂಬ ವೈದಿಕ ರೂಢಿಯನ್ನು ಅತ್ಯಂತ ಸೂಕ್ಷ್ಮವಾಗಿ ಇಲ್ಲಿ ಗೇಲಿ ಮಾಡಲಾಗಿದೆ ಎಂದಾಗಲೀ ಅಥವಾ ಈ ಕಾವ್ಯಭಾಗದ ಹಿಂದೆ ಆ ಬಗೆಯ ಸೂಕ್ಷ್ಮ ವ್ಯಂಗ್ಯವಿದೆಯೆಂದಾಗಲೀ ಅರ್ಥ ಮಾಡುವುದಕ್ಕೂ ಸಾಧ್ಯವಾಗಬಹುದಿತ್ತು. ಆದರೆ ಅದೇ ಕಾವ್ಯದ ಈ ಮುಂದಿನ ಹೇಳಿಕೆಯನ್ನು ನೋಡಿದಾಗ ಬಹುಶಃ ಆ ಅರ್ಥ ಸಾಧ್ಯವಿರುವಂತಿಲ್ಲವೆಂಬುದು ಗೋಚರವಾಗುತ್ತದೆ. ಅದೇನೆಂದರೆ,

" ಜಾತಿಮಾದರಚನ್ನನೆಂಬ ನಾಮಂ ತನಗೆ
ಓತಿರ್ಪುದನ್ವರ್ಥವಾಗಿ[2] "

ಅಂದರೆ, ಜಾತಿಯಲ್ಲಿ ಮಾದಿಗನಾದ ಚೆನ್ನಯ್ಯನಿಗೆ ಮಾದಾರ ಚೆನ್ನಯ್ಯನೆಂಬ ಹೆಸರು ಅನ್ವರ್ಥವಾಗಿತ್ತು ಎಂಬ ಕವಿಯ ವರ್ಣನೆಯ ಅರ್ಥವೇನು ? ಬಹುಶಃ 'ಹೊಲೆಯ' 'ಮಾದಿಗ' ಅಥವಾ ಅಸ್ಪೃಶ್ಯ ಎಂದರೆ ಕೀಳು ಭಾವನೆ ಸ್ವತಃ ಕವಿಯ ಮನಸ್ಸಿನ ಮೂಲದಲ್ಲೇ ಇರುವಂತಿದೆ. ಏಕೆಂದರೆ ತನ್ನ ಹಲವಾರು ವಚನಗಳಲ್ಲಿ ಕುಲಮದವನ್ನು ಖಂಡಿಸಿರುವ ಚನ್ನಯ್ಯಲ್ಲಿ ತಾನು ಕೀಳೆಂಬ 'ಕೀಳರಿಮೆ'. ವಾಸ್ತವವೆಂದು ಬಗೆಯಲು ಬರುವಂತಿಲ್ಲ. ಚೆನ್ನಯ್ಯನಲ್ಲಿ ಮಾತ್ರವಲ್ಲ ಆ ಕಾಲದ ಯಾವ ಶರಣನಲ್ಲೂ ಈ ಕೀಳರಿಮೆ ಕಂಡುಬರುವಂತಿಲ್ಲ. ಇನ್ನು, ಇಂಥದೇ ಪ್ರಸಂಗವನ್ನು ರಾಘವಾಂಕನ 'ಹರಿಶ್ಚಂದ್ರ ಕಾವ್ಯ'ದಲ್ಲೂ ಕಾಣಬಹುದು. ವಿಶ್ವಾಮಿತ್ರ ತಾನು ಸೃಷ್ಟಿಸಿದ ಮಾಯದ ಕನ್ಯೆಯರನ್ನು ಮದುವೆಯಾಗೆಂದು ಹರಿಶ್ಚಂದ್ರನನ್ನು ಒತ್ತಾಯಿಸುತ್ತಾನೆ. ಆದರೆ, ಆ ಸಂದರ್ಭದಲ್ಲಿ ಅವರು ಸಂದರಿಯರಲ್ಲವೆಂಬ ಕಾರಣಕ್ಕಾಗಿಯಾಗಲಿ, ಅಥವಾ ಆ ಹುಡುಗಿಯರು ನಡೆತೆವುಳ್ಳವರಲ್ಲವೆಂದಾಗಲಿ, ಅಥವಾ ತಾನು ಏಕ ಪತ್ನಿ ವ್ರತಸ್ಥನೆಂಬ ಕಾರಣವನ್ನು ಮುಂದೆ ಮಾಡಿಕೊಂಡಾಗಲಿ ಅವರನ್ನು ಮದುವೆಯಾಗುವುದಿಲ್ಲವೆಂದೇನೂ ಹರಿಶ್ಚಂದ್ರ ಹೇಳುವುದಿಲ್ಲ. ಬದಲಾಗಿ " ಜೊರೆ

1. ಪಿ. ಜಿ. ಹಳಕಟ್ಟಿ. ಹರಿಹರನ ರಗಳೆಗಳು. ಪು. 349 - 57
2. ಅದೇ.

ಗೆಟ್ಟವ ಹೊಲತಿಯರ ನೆರಸಿಕೋ ಎಂದು ನೀಂ ಕರುಣಿಸಲುಬಹುದೆ? ಶಾನದನೋತು ಮಾಡಲುಬಹುದೆ?[1]. ಅಂದರೆ, ಇಲ್ಲಿ ಕೂಡ ಹರಿಹರನಂತೆಯೇ ರಾಘವಾಂಕನ ಮನಸ್ಸಿನಲ್ಲೂ ಹೊಲೆಮಾದಿಗರೆಂದರೆ ಕೀಳೆಂಬ ಭಾವನೆ ಈ ಇಬ್ಬರು ಕವಿಗಳ ಮನೋಧರ್ಮದ ಮೂಲದಲ್ಲಿ ಸ್ಪಷ್ಟವಾಗಿರುವಂತೆ ತೋರುತ್ತದೆ* ಆದರೆ ಅದೇ ಹೊಲೆಮಾದಿಗರನ್ನು ಶರಣ ಪ್ರಥಮರು ನಡೆಸಿಕೊಂಡಿಲ್ಲವೆಂಬುದನ್ನು ವಚನಗಳಲ್ಲಿ ಕಾಣಬಹುದಾಗಿದೆ. ಉದಾಹರಣೆಗೆ ದೇವರದಾಸಿಮಯ್ಯನ ಒಂದು ವಚನ.

" ಕೀಳು ದ್ರೋಹರಕ್ಕ ಕೀಳು ಮಾದರಚೆನ್ನ,
ಕೀಳು ಓಹಿಲದೇವ ಕೀಳು ಉದ್ಭಟಯ್ಯ
ಕೀಳಂಗಲ್ಲದೆ ಹಯನು ಕರೆಯದು ಕಾಣಾ ರಾಮನಾಥ".

ಬಸವಣ್ಣನ ಇನ್ನೊಂದು ವಚನ :

" ಸೂಳೆಗೆ ಹುಟ್ಟಿದ ಕೂಸಿನಂತೆ
ಆರನಾದಡೆಯೂ ' ಅಯ್ಯ' ಎನಲಾರೆನಯ್ಯಾ
ಚೆನ್ನಯ್ಯನೆಮ್ಮಯ್ಯನು
ಚೆನ್ನಯ್ಯನ ಮಗ ನಾನು
ಚೆನ್ನಯ್ಯನ ಮನೆಯ ದಾಸನ ಮಗ ನಾನು
ಚೆನ್ನಯ್ಯನೆನ್ನ ಮುತ್ತಯ್ಯನಜ್ಜನಪ್ಪಯ್ಯ
ಅಯ್ಯಗಳ ಅಯ್ಯ ನಮ್ಮ ಮಾದಾರ ಚೆನ್ನಯ್ಯ
ಕುಲತಿಲಕ ನಮ್ಮ ಮಾದಾರ ಚೆನ್ನಯ್ಯ
ಉನ್ನತ ಮಹಿಮ ಉಮೇಶನಿಂದಧಿಕ
ಚಿಕ್ಕಯ್ಯ ಚೆನ್ನಯ್ಯಗಳೆತ್ತಿ ಮುದ್ದಾಡಿದರೆನ್ನ
ಮಹಾದಾನಿ ಕೂಡಲ ಸಂಗನುವೇವಾ
ಮಾದಾರ ಚೆನ್ನಯ್ಯನ ಮಗ ನಾನಯ್ಯ".

ಇನ್ನು ಹರಿಹರನ ಬಗ್ಗೆ ಕೊನೆಯದಾಗಿ ಉದ್ಭವಿಸಬಹುದಾದ ಇನ್ನೊಂದು ಮುಖ್ಯವಾದ ಆಕ್ಷೇಪವನ್ನೂ ಬಹುಶಃ ಇಲ್ಲೇ ಪ್ರಸ್ತಾಪಿಸುವುದು ಸೂಕ್ತವೆಂದು ತೋರುತ್ತದೆ. ಅದೇನೆಂದರೆ, ಹರಿಹರ ತನ್ನ ಕಥಾನಾಯಕರನ್ನೆಲ್ಲಾ ನೇರವಾಗಿ ಕೈಲಾಸಕ್ಕೆ ಕಳಿಸಿರುವ

---

1 ರಾಘವಾಂಕನ ಹರಿಶ್ಚಂದ್ರ ಕಾವ್ಯ. ೭ನೆ ಸ್ಥಲ. ಪು ೨೩. (ಶಂ. ಎನ್. ಬಸವಾರಾಧ್ಯ)

* ಈ ವಿಷಯದಲ್ಲಿ ಆಸಕ್ತಿವುಳ್ಳವರು ಇನ್ನಷ್ಟು ಹೆಚ್ಚಿನ ವಿವರಗಳಿಗಾಗಿ ನನ್ನ "ಪ್ರತಿಪಾದನೆ" ಗ್ರಂಥದ "ಹರಿಹರನ ಮಾದಾರ ಚೆನ್ನಯ್ಯ : ಒಂದು ಅಧ್ಯಯನ" ಎಂಬ ಲೇಖನವನ್ನು ಅವಲೋಕಿಸಬಹುದು.

ನೆಂಬುದು. ಇದು ನಿಜವಾಗಿಯೂ ಒಂದು ಅರ್ಥಪೂರ್ಣವಾದ ಪ್ರಶ್ನೆಯೆಂಬುದರಲ್ಲಿ ಅನುಮಾನವಿದ್ದಂತಿಲ್ಲ. ಆದರೆ, ಈ ಪ್ರಶ್ನೆ ಇಡೀ ಶರಣರ ಕ್ರಾಂತಿಕ ಆಂದೋಲನವನ್ನೇ ಅಲ್ಲಗಳೆಯುವಷ್ಟು ಸಮರ್ಥವಾದುದಲ್ಲವೆಂಬುದನ್ನು ನೆನಪಿಡಬೇಕು. ಏಕೆಂದರೆ, ಹರಿಹರ ಯಾವ್ಯಾವ ಶರಣರನ್ನು ಕುರಿತು ಕಾವ್ಯ ರಚನೆ ಮಾಡಿದ್ದಾನೋ, ಆ ಎಲ್ಲ ಶರಣರನ್ನೂ ನೆಟ್ಟಗೆ ಕೈಲಾಸಕ್ಕೆ ಕೊಂಡೊಯ್ದು ಬಿಟ್ಟು ಬಂದಿದ್ದಾನೆ ಎಂಬುದು ಶರಣರ ವಾಸ್ತವ ಬದುಕಿನೊಡನೆ ಹೊಂದಿಕೆಯಾಗದ ಅವಾಸ್ತವವೆಂಬುದನ್ನು ವಚನಗಳಲ್ಲಿ ಕಾಣಬಹುದಾಗಿದೆ – ಅಷ್ಟೇ ಅಲ್ಲದೆ, ಮರ್ತ್ಯಲೋಕದ ಬದುಕನ್ನು ಯಶಸ್ವಿಯಾಗಿ ಬದುಕಿ ಸಾರ್ಥಕತೆಯನ್ನು ಸಾಧಿಸಬೇಕೆಂಬುದೇ ಅಲ್ಲದೆ, ಸಿದ್ಧರಾಮನಂಥ ಕಾಯಕವಾದಿಗಳು ಕೈಲಾಸದ ಪರಿಕಲ್ಪನೆಯನ್ನೇ ಪ್ರಶ್ನಿಸಿರುವರೆಂಬುದನ್ನು ವಚನಗಳಲ್ಲಿ ಕಾಣಬಹುದಾಗಿದೆ. ಅದಾಗ್ಯೂ, ಹರಿಹರನನ್ನು ಕುರಿತು ಈ ಆಕ್ಷೇಪದ ಸಂದರ್ಭದಲ್ಲಿ ಮರೆಯಲು ಸಾಧ್ಯವಾದ ಒಂದು ಮುಖ್ಯ ಸಂಗತಿಯೆಂದರೆ ಜೈನ, ವೈದಿಕ ಪುರಾಣ ಕಾವ್ಯಗಳನ್ನು ಬಲ್ಲವರಿಗೆ, ಹರಿಹರ ತನ್ನ ಪೌರಾಣಿಕ ಕಾವ್ಯ ರಚನೆಗೆ ಆರಿಸಿಕೊಂಡ ವಸ್ತು ಅಪೂರ್ವವಾದುದೆನ್ನಿಸದೆ ಇರಲಿಕ್ಕಾಗಲೀ, ಅಥವಾ ಈಗ್ಗೆ ಸುಮಾರು ಸಾವಿರ ವರ್ಷಗಳಷ್ಟು ಹಿಂದೆಯೇ ಶೈವ ಸಂಸ್ಕೃತಿಗೆ ಹೊಸ ಆಲೋಚನೆಯನ್ನು ಹುಟ್ಟು ಹಾಕಿದವರೇ ಚೆನ್ನಯ್ಯ, ಕಕ್ಕಯ್ಯಾದಿ ಶೂದ್ರಾತಿಶೂದ್ರ, ದಲಿತರೆಂಬ ವಾಸ್ತವ ಸತ್ಯವನ್ನಾಗಲೀ ಹರಿಹರನನ್ನು ಕುರಿತ ಆ ಆಕ್ಷೇಪದಿಂದಲೇ ಅಲ್ಲಗೆಳೆಯಲು ಸಾಧ್ಯವಿರುವಂತೆ ತೋರುವುದಿಲ್ಲ. ಆದರೆ, ಇಷ್ಟೆಲ್ಲಾ ಹೇಳಿದ ನಂತರವೂ ಉಳಿಯುವ ಅಷ್ಟೇ ಮುಖ್ಯವಾದ ಪ್ರಶ್ನೆಯೆಂದರೆ ಹನ್ನೆರಡನೆ ಶತಮಾನದವರೆಗೂ ಅವ್ಯಾಹತವಾಗಿ ನಡೆದು ಬಂದ ದಲಿತ ವರ್ಗದ ಈ ಶರಣ ಸಂಘಟನೆ ಹರಿಹರಾದಿ ಕವಿಗಳ ನಂತರ ಏನಾಯಿತೆಂಬುದೇ ಆ ಪ್ರಶ್ನೆ. ಆದರೆ ಸದ್ಯ ಅದನ್ನಿಲ್ಲಿ ವಿವರಿಸಬೇಕಾದ ಅಗತ್ಯವಿದ್ದಂತೆ ತೋರುವುದಿಲ್ಲ.

ಇನ್ನು ಎರಡನೆಯ ಅಂಶವೆಂದರೆ, ದಲಿತ ವರ್ಗದ, ಭಕ್ತಿ ಪ್ರಧಾನವಾದ ಈ ಸಾಂಸ್ಕೃತಿಕ ಆಂದೋಲನ ಎಷ್ಟರ ಮಟ್ಟಿಗೆ ಐತಿಹಾಸಿಕವಾದುದು ಅಥವಾ ಪ್ರಾಚೀನವಾದುದೆಂಬ ಪ್ರಶ್ನೆ ಬಹುಶಃ ಸಹಜವಾಗಿಯೇ ಕುತೂಹಲವುಳ್ಳದ್ದೆನಿಸುತ್ತದೆ. ಅಂತೆಯೇ " ಈ ಆದ್ಯರ ವಚನ ಸಾಹಿತ್ಯವು ಕ್ರಿ. ಶ. 9 - 10ನೇ ಶತಮಾನದಷ್ಟು ಹಿಂದಿನದು. ಈಗ ನಮಗೆ ಉಪಲಬ್ಧವಿರುವ ಎಷ್ಟೋ ವಚನಗಳು ಪಂಪನ ಸಾಹಿತ್ಯಕ್ಕಿಂತ ಪ್ರಾಚೀನವೆಂದಾಗ ಯಾರಾದರೂ ಹುಸಿ ನಗುವನ್ನು ನಕ್ಕರೆ ಅವರಿಗೆ ನವನವೋನ್ವೇಷಿತ ಸತ್ಯ ವಿಚಾರಗಳನ್ನು ಸ್ವಾಗತಿಸುವ ಪ್ರಗತಿಪರ ದೃಷ್ಟಿ ಇಲ್ಲವೆನ್ನಬೇಕಾಗುವುದು. ಜನಸಾಮಾನ್ಯರ ಜಾಗೃತಿಗಾಗಿ ಬಳಕೆಯ ಮಾತಿನಲ್ಲಿ ಬರೆದ ಸರಳ ಶೈಲಿಯ ಒಂದು ಕಾಲದ ಸಾಹಿತ್ಯವನ್ನು, ಅದೇ ಕಾಲದಲ್ಲಿ ಪಂಡಿತ ಮಂಡಳಿಯ

ಮೆಚ್ಚುಗೆಗಾಗಿ ಆಡಂಬರದ ಕ್ಲಿಷ್ಟ ಶೈಲಿಯಲ್ಲಿ ಬರೆದ ಸಾಹಿತ್ಯದೊಡನೆ ಹೋಲಿಸಿ, ಮೊದಲನೆಯದು ಈಚಿನದೆಂದೂ, ಎರಡನೆಯದೇ ಪ್ರಾಚೀನವೆಂದೂ ಭ್ರಮೆಗೊಳ್ಳಬಾರದು[1]". ಇದು ಪ್ರೊ|| ಎಲ್. ಬಸವರಾಜುರವರ ಅಭಿಪ್ರಾಯ. ಆದರೆ "ವಚನ ಸಾಹಿತ್ಯವು ಇಷ್ಟು ಹಿಂದೆ ಇತ್ತೆನ್ನಲು ಆಧಾರ ಸಾಲದೆಂದು ನಮಗೆ ತೋರುತ್ತದೆ[2]". ಎಂಬುದು ಪ್ರೊ|| ಮುಗಳಿಯವರ ಅಭಿಪ್ರಾಯ. ಇದೇ ಸಂದರ್ಭದಲ್ಲಿ ಜೇಡರ ದಾಸಿಮಯ್ಯನ ವಚನದಲ್ಲಿ ಬಳಸಲಾಗಿರುವ "ಸೂಳ್ನುಡಿ" ಎಂಬ ಉಕ್ತಿಯಿಂದ ಊಹಿಸಬಹುದಾಗಿರುವ ಐತಿಹಾಸಿಕ ಅರ್ಥಗಳ ದೃಷ್ಟಿಯಲ್ಲಿ ಪ್ರೊ|| ಚಿದಾನಂದಮೂರ್ತಿಯವರ ಒಂದು ಅಭಿಪ್ರಾಯವನ್ನೂ ಇಲ್ಲಿ ಸೂಚಿಸಬಹುದೆಂದು ತೋರುತ್ತದೆ. "ದಾಸಿಮಯ್ಯನಲ್ಲಿ ವಚನ ಎಂಬ ಮಾತು ಬಂದಿಲ್ಲ. 'ಸೂಳ್ನುಡಿ' ಎಂಬ ಮಾತು ಬಂದಿದೆ.... ಸೂಳ್ನುಡಿ ಎಂದರೆ ಸರದಿಯ ಪ್ರಕಾರ ಆಡುವ ಮಾತು ಎಂದರ್ಥ.... ಹೀಗೆ ಸೂಳ್ನುಡಿ ಎಂಬ ಮಾತು ಆ ಕಾಲದ ಧಾರ್ಮಿಕ ಜೀವನಕ್ಕೆ ಒಂದು ಕೈಗನ್ನಡಿ ಇದ್ದಂತಿದೆ, ಶಿವಶರಣರ ಗೋಷ್ಠಿಗಳು, ಅಲ್ಲಿ ನಡೆಯುತ್ತಿದ್ದ ಸಂಭಾಷಣೆ, ಸಂಭಾಷಣೆಯ ಕಾಲದಲ್ಲಿ ರಚನೆಯಾಗುತ್ತಿದ್ದ ವಚನ ಸಾಹಿತ್ಯ-ಇಷ್ಟನ್ನೂ ಈ ಪದ ತನ್ನ ಗರ್ಭದಲ್ಲಿ ಒಳಗೊಂಡಿರುವಂತಿದೆ*". ಈ ಮೂರು ಜನ ವಿದ್ವಾಂಸರ ಅಭಿಪ್ರಾಯವನ್ನು ಸ್ವಲ್ಪ ಸೂಕ್ಷ್ಮವಾಗಿ ಪರಿಶೀಲಿಸುವುದು ಸದ್ಯ ಸೂಕ್ತವೆಂದು ತೋರುತ್ತದೆ. ಮೊದಲನೆಯದಾಗಿ ಪ್ರೊ|| ಎಲ್. ಬಸವರಾಜುರವರು ತಿಳಿದಿರುವ "ಜನಸಾಮಾನ್ಯರ ಜಾಗೃತಿಗಾಗಿ" ಸರಳ ಶೈಲಿಯ ವಚನ ಪ್ರಕಾರ ಸೃಷ್ಟಿಯಾಯಿತೆಂಬ ಮಾತು ಇಲ್ಲಿ ತುಂಬಾ ಗಮನಾರ್ಹ. ಇನ್ನು ಎರಡನೆಯದಾಗಿ "ಸೂಳ್ನುಡಿ" ಎಂಬ ಉಕ್ತಿಯ ಸಂದರ್ಭದಲ್ಲಿ ಪ್ರೊ|| ಚಿದಾನಂದಮೂರ್ತಿಯವರು ಚಿತ್ರಿಸಿರುವ ಐತಿಹಾಸಿಕ ಅರ್ಥ ಚಿತ್ರಣ ಬಸವ, ಅಲ್ಲಮರ ಕಾಲದ ಅನುಭವ ಗೋಷ್ಠಿಯಂಥ ನಿದರ್ಶನದಿಂದ ಆ ಅರ್ಥ ಚಿತ್ರ ಅಧಿಕೃತಗೊಂಡು ನೈಜವೆನಿಸುತ್ತದೆ. ಅದೂ ಅಲ್ಲದೆ, ಬಸವ ಯುಗದಲ್ಲಿ ಮಾತ್ರ ಅಪಾರ ಸಂಖ್ಯೆಯ ವಚನಗಳ ಸಂಗ್ರಹ ಹಾಗೂ ಸಂರಕ್ಷಣ ಕಾರ್ಯ ನಡೆದಿರುವುದು ಸಾಧ್ಯ. ಏಕೆಂದರೆ, ಮೊದಲನೆಯದಾಗಿ, ಬಸವಣ್ಣ ಅಧಿಕಾರದಲ್ಲಿದ್ದವನು. ಎರಡನೆಯದಾಗಿ, ಮತ್ತು ಮುಖ್ಯವಾಗಿ, ಶರಣರ ಆಂದೋಲನ ಬಸವ ಯುಗದಲ್ಲಿ ಅತ್ಯಂತ ಸಾಮಾನ್ಯರಿದ್ದ ಶರಣರ ಸಂಘಟನೆಗೆ ಲಭ್ಯವಿರುವುದು ಸಾಧ್ಯವಿರುವಂತಿಲ್ಲ. ಹಾಗಾಗಿ, ಈಗ ದೊರೆತಿರುವ ದಾಸಿಮಯ್ಯನ ಕೆಲವು ವಚನಗಳನ್ನುಳಿದರೆ ಅವನಿಗಿಂತ ಪ್ರಾಚೀನರಾದ ಶರಣರ ವಚನಗಳು ಮಾತ್ರವಲ್ಲದೆ ಸ್ವತಃ

---

1 ಡಾ|| ಎಲ್. ಬಸವರಾಜು, ಅಲ್ಲಮನ ವಚನ ಚಂದ್ರಿಕೆ. ಪು. 11

2 ಡಾ|| ರಂ. ಶ್ರೀ ಮುಗಳಿ, ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು. ಪು. 120

* ಡಾ|| ಎಂ. ಚಿದಾನಂದಮೂರ್ತಿ, ಸಂಶೋಧನ ತರಂಗ. ಭಾಗ-1. ಪು. 30

ದಾಸಿಮಯ್ಯನ ಕಾಲದ ಎಷ್ಟೋ ಜನ ಶರಣರ ವಚನಗಳೂ ಈಗ ನಮಗೆ ಸಿಗದಿರುವ ಸಾಧ್ಯತೆಯೇ ಬಹಳವಿದೆ. ಏಕೆಂದರೆ, ವಚನಗಳ ಭಾಷೆ, ಭಾವ ಹಾಗೂ ಅವುಗಳ ಅಭಿವ್ಯಕ್ತಿಯ ಹಿಂದಿನ ಮನೋಧರ್ಮದ ಸ್ವರೂಪ ಮುಂತಾದ ವಿಚಾರಗಳಲ್ಲಿ ದಾಸಿಮಯ್ಯನ ವಚನಗಳಿಗೂ ಬಸವನ ಕಾಲದ ವಚನಗಳಿಗೂ ಇರುವ ವ್ಯತ್ಯಾಸ ಅತ್ಯಂತ ಸ್ಪಷ್ಟವಾಗಿದೆ. ಅಂದ ಬಳಿಕ, ವಚನಗಳ ಶೈಲಿ ದಾಸಿಮಯ್ಯನಿಂದ ಬಸವನ ಕಾಲದವರೆಗೆ ಕಂಡಿದೆಯೆಂಬುದು ಎಷ್ಟರ ಮಟ್ಟಿಗೆ ವಾಸ್ತವವೋ, ದಾಸಿಮಯ್ಯನಿಗಿಂತ ಹಿಂದೆಯೇ ಅದು ತನ್ನ ಆಲಂಭ ಹಾಗೂ ಬೆಳವಣಿಗೆಯನ್ನು ಹೊಂದುತ್ತ ಬಂದಿರಬೇಕೆಂಬುದು ಕೂಡ ಅಷ್ಟೇ ವಾಸ್ತವ ತರ್ಕವೆನಿಸುತ್ತದೆ. ಇದಕ್ಕೆ, ದಾಸಿಮಯ್ಯ ತನ್ನ ವಚನದಲ್ಲಿ ಸ್ಮರಿಸಿರುವ ಪೂರ್ವದ ಶರಣರ ಹೆಸರುಗಳನ್ನು ನೆನೆಯಬಹುದು. ಅಲ್ಲದೆ ಹಾಗೆ ಸ್ಮರಿಸಲ್ಪಟ್ಟಿರುವ ಶರಣರು ಸಾಮಾನ್ಯರೆನಿಸಿ ಹೊಲೆಮಾದಿಗರು ಅಥವಾ ದಲಿತ ವರ್ಗದ ಜನ ಎಂಬುದು ಸದ್ಯ ತುಂಬಾ ಗಮನಾರ್ಹ ಸಂಗತಿ.

ಇನ್ನು, ಶರಣರಾಗಿ ಸಂಘಟಿತರಾದ ಈ ದಲಿತ ವರ್ಗದ ಜನರಿಂದ ನಡೆಸಲ್ಪಟ್ಟ ಈ ಸಾಂಸ್ಕೃತಿಕ ಆಂದೋಲನದ ಆರಂಭದ ಸೂಚನೆಯನ್ನು ಒಂದೆರಡು ಮಾತುಗಳಲ್ಲಿ ಹೇಳಬಹುದೆನಿಸುತ್ತದೆ. ವಚನಗಳ ವಸ್ತು, ಭಾಷೆ ಹಾಗೂ ಬಂಧದ ದೃಷ್ಟಿಯಲ್ಲಿ ಹತ್ತನೆ ಶತಮಾನದ ಕೊನೆ ಹಾಗೂ ಹನ್ನೊಂದನೆ ಶತಮಾನದ ಆರಂಭದ ಕವಿಗಳೆನ್ನಲಾದ ಬ್ರಹ್ಮಶಿವನ "ಸಮಯಪರೀಕ್ಷೆ" ಹಾಗೂ ನಯಸೇನನ "ಧರ್ಮಾಮೃತ"ಗಳಿಂದ ದಾಸಿಮಯ್ಯಾದಿ ವಚನಕಾರರು ಪ್ರಭಾವಿತರಾಗಿದ್ದಾರೆಂಬುದು ಕೆಲ ವಿದ್ವಾಂಸರ ಅಭಿಪ್ರಾಯವಾಗಿದೆ[2]. ಆದರೆ ಈ ಅಭಿಪ್ರಾಯ ಸೂಕ್ತವೆನ್ನಲಿಕ್ಕೆ ಸಾಧ್ಯವಿರುವಂತಿಲ್ಲ. ಏಕೆಂದರೆ ಅದೇ ಬ್ರಹ್ಮಶಿವನ "ಸಮಯ ಪರೀಕ್ಷೆ"ಯಲ್ಲಿ ಇದಕ್ಕೆ ವಿರುದ್ಧವಾದ ಸಂಗತಿಯಿರುವುದನ್ನು ಕಾಣಬಹುದಾಗಿದೆ. ಅದೆಂದರೆ, ಜೇಡರ ದಾಸಿಮಯ್ಯನ ಜೀವನದಲ್ಲಿ ಘಟಿಸಿತೆನ್ನಲಾದ ಅವನ ಇಷ್ಟ ದೈವವಾದ ರಾಮನಾಥ ಅವನಿಗೆ ಬಾಗಿಲು ತೆರೆದುದನ್ನು ಬ್ರಹ್ಮಶಿವ ತನ್ನ "ಸಮಯ ಪರೀಕ್ಷೆ"ಯಲ್ಲಿ ಗೇಲಿ

---

2. ಕೆ. ಜಿ. ನಾಗರಾಜಪ್ಪ, ವೀರಶೈವ ಧರ್ಮ ಮತ್ತು ಕನ್ನಡ ಸಾಹಿತ್ಯ, (ರುಜುವಾತು ಸಂಚಿಕೆ 13, ಪುಟ 45) ತಾ॥ 2-12-1984 ರಂದು ಬೆಂಗಳೂರಿನ ಎಕ್ಯುಮಿನಿಕಲ್ ಕ್ರಿಶ್ಚಿಯನ್ ಸೆಂಟರ್‌ನಲ್ಲಿ "The people as reflected in Contemporary Kannada Literature" ಎಂಬ ವಿಷಯದ ಮೇಲೆ ನಡೆದ ವಿಚಾರ ಸಂಕಿರಣದಲ್ಲಿ, ನಾಗರಾಜಪ್ಪನವರ ಇದೇ ಅಭಿಪ್ರಾಯವನ್ನು ಡಾ॥ ಜಿ. ಎಸ್. ಶಿವರುದ್ರಪ್ಪನವರು ಸಮರ್ಥಿಸಿರುವುದು ಅಲ್ಲಿ ಹಾಜರಿದ್ದವರಿಗೆ ನೆನಪಿರಬೇಕೆಂದು ತಿಳಿಯುವೆ.

ಮಾಡಿದ್ದಾನೆ[1]. ಅಲ್ಲದೆ ತನ್ನ ಮಗನ ಶಿರವನ್ನು ಕಡಿದು ಅಡಿಗೆ ಮಾಡಿ ಶಿರವನ್ನು ಉಣಬಡಿಸಿದ ಸಿರಿಯಾಳ ಸೆಟ್ಟಿಯ ಜೀವನದ ಪವಾಡವನ್ನೂ ಗೇಲಿ ಮಾಡಲಾಗಿದೆ. ಹಾಗೆಯೇ ಪದ್ಯದಲ್ಲಿ ಗಮನಿಸಬೇಕಾಗಿರುವ ಇನ್ನೆರಡು ಮುಖ್ಯಾಂಶಗಳೆಂದರೆ : 1. ದಾಸಿಮಯ್ಯ ಮತ್ತು ಸಿರಿಯಾಳರ ಈ ಎರಡು ಪವಾಡಗಳನ್ನು ನಡೆದುಹೋದ ಎರಡು ಪೌರಾಣಿಕ ಕಥಾನಕ ಘಟನೆಗಳನ್ನಾಗಿ ಪ್ರಸ್ತಾಪಿಸಲಾಗಿದೆಯೇ ಹೊರತು ಬ್ರಹ್ಮಶಿವನಿಗೆ ಸಮಕಾಲೀನ ಘಟನೆ ಎನಿಸುವಂತಿಲ್ಲ. 2. ಎರಡನೆಯದಾಗಿ ಬ್ರಹ್ಮಶಿವನ ಈ ಪದ್ಯದಲ್ಲಿ ಅಡಕಗೊಳಿಸಲಾಗಿರುವ ಎಲ್ಲ ರೂಪಿಮಾ (morpheme)ಗಳನ್ನೂ ಬಿಡಿಬಿಡಿಯಾಗಿಸಿ ಅವುಗಳನ್ನು ಅರ್ಥವಿಜ್ಞಾನ (Semantic)ದ ವಿಶ್ಲೇಷಣೆಗೆ ಗುರಿಪಡಿಸಿದಾಗ ಹೊರಡುವ ಇನ್ನೊಂದು ವಾಸ್ತವ ಸಂಗತಿಯೆಂದರೆ ಇಡೀ ಪದ್ಯದ ಭಾಷಾಭಿವ್ಯಕ್ತಿ ಭೂತಕಾಲ (pasttense)ದ ಧಾಟಿಯಲ್ಲಿದೆ ಎಂಬುದನ್ನು ಪದ್ಯದ ಎರಡನೇ ಸಾಲಿನಲ್ಲಿರುವ "ಒಮ್ಮೆ" ಎಂಬ ಮಾತು ಸ್ಥಿರಪಡಿಸುತ್ತದೆ. ಅಂದರೆ, ದಾಸಿಮಯ್ಯನ ಜೀವಿತ ಕಾಲದಲ್ಲಿ ನಡೆಯಿತೆನ್ನಲಾದ ಈ ಪವಾಡ ಬ್ರಹ್ಮಶಿವನ ಕಾಲಕ್ಕೆ ತುಂಬಾ ಜನಜನಿತವಾದ ಘಟನೆಯೆನಿಸಿರಲೇಬೇಕು ; ತನ್ಮೂಲಕ ಧಾರ್ಮಿಕವಾಗಿ ಜನರ ಮನಸ್ಸಿನ ಪರಿವರ್ತನೆಗೂ ಈ ಪವಾಡ ಯತ್ನಿಸುತ್ತ ನಡೆದಿರಬೇಕು ; ಅನಂತರ ಮಾತ್ರ ಬ್ರಹ್ಮಶಿವ ತನ್ನ ಕಾವ್ಯದ ಸಂದರ್ಭದಲ್ಲಿ ಇದನ್ನು ಗೇಲಿ ಮಾಡಲೆತ್ನಿಸಿರಬೇಕು. ಆದ್ದರಿಂದ, ಸಾಧ್ಯವೂ ಸಹಜವೂ ಎನಿಸುತ್ತಿರುವ ಈ ತರ್ಕವನ್ನು ಒಪ್ಪಿಕೊಂಡ ಪಕ್ಷದಲ್ಲಿ ನಿಸ್ಸಂದೇಹವಾಗಿ ಹನ್ನೊಂದನೆ ಶತಮಾನದ ಬ್ರಹ್ಮಶಿವನಿಗಿಂತ ದಾಸಿಮಯ್ಯ ಕೊನೆಯ ಪಕ್ಷ ಒಂದು ತಲೆಮಾರು ಅಥವಾ ಅರ್ಧ ಶತಮಾನವಾದರೂ ಹಿರಿಯನಿರಬೇಕೆಂದು ಊಹಿಸಲವಕಾಶದಂತಾಗುತ್ತದೆ. ತದನಂತರ, ಅದೇ ದಾಸಿಮಯ್ಯ ತನ್ನ ವಚನದಲ್ಲಿ ಸ್ಮರಿಸಿರುವ ಮಾದಾರ ಚೆನ್ನಯ್ಯ ಡೋಹರ ಕಕ್ಕಯ್ಯರು *

---

1 "ಗಿರಿಜೇಶಂ ತೆರದಂ ಜೇ
ಡರ ದಾಸಿಗೆ ಪಡಿಯುನೊಮ್ಮೆ ಮಗನಂ ಕೊಂಡಾ
ಸಿರಿಯಾಳನಿಕ್ಕಲುಂಡ
ಅಚ್ಚರಿಯೆನೆ ಜೋಳ್ವಾಳೊತ್ತಿದಂ ಗಡಮಗನಂ"

ಬ್ರಹ್ಮಶಿವ ಕವಿ ವಿರಚಿತ ಸಮಯ ಪರೀಕ್ಷೆ. ಅ-9, ಪ-29, ಪು-198 (ಸಂ. ಬಿ. ಎಸ್. ಕುಲಕರ್ಣಿ) ಈ ಪದ್ಯದಿಂದ ಗೊತ್ತಾಗುವ ಇನ್ನೊಂದು ಮುಖ್ಯ ಸಂಗತಿಯೆಂದರೆ, ನಯಸೇನ ಮತ್ತು ಬ್ರಹ್ಮಶಿವರ ಕಾಲದ ಜೈನ ಧರ್ಮದ ಬೆಳವಣಿಗೆಗೆ ಅಂದಿನ ಶರಣ ಧರ್ಮದ ಆಂದೋಲನ ಒಂದು ಬಹು ದೊಡ್ಡ ಸವಾಲಾಗಿಯೇ ಪರಿಣಮಿಸಿರಬೇಕು.

* "ಕೀಳು ಡೋಹರ ಕಕ್ಕ, ಕೀಳು ಮಾದರ ಚೆನ್ನ
ಕೀಳು ಓಹಿಲದೇವ, ಕೀಳು ಉದ್ಭಟಯ್ಯ
ಕೀಳಂಗಲ್ಲದೆ ಪನ್ನಿಯ ಕರೆಯದು ಕಾಣಾ ರಾಮನಾಥ."

ಹಿರಿಯ ಶರಣನಾದ ದಾಸಿಮಯ್ಯ ಸ್ಮರಿಸಿಕೊಂಡಿರುವ ಈ ಕಕ್ಕಯ್ಯನೂ, ಅನಂತರ ಬಸವಣ್ಣ ಮತ್ತು ಚನ್ನಬಸವಣ್ಣರು ಸ್ಮರಿಸಿಕೊಂಡಿರುವ ಹಾಗೂ ಕಾತರವಳ್ಳಿ ಯುದ್ಧದಲ್ಲಿ ಮಡಿದ ಕಕ್ಕಯ್ಯನೂ ಒಬ್ಬನೇ ಎಂದು ಬರೆಯುವುದು ಚರಿತ್ರೆಗೆ ಅನ್ಯಾಯವಾಗದ ಊಹೆಯೆಂದಾಗಲೀ, ತರ್ಕಬದ್ಧವಾದ ಸಂಗತಿಯೆಂದಾಗಲೀ ಭಾವಿಸುವುದು ಸೂಕ್ತವೆನಿಸುವಂತಿಲ್ಲ.

ದಾಸಿಮಯ್ಯನಿಗಿಂತ ಸಾಕಷ್ಟು ಹಿರಿಯರಿರಲೇಬೇಕೆಂಬುದು ಸ್ಥಿರಪಡುತ್ತದೆ. ಹಾಗೆಯೇ, ಇಲ್ಲಿ ಗಮನಿಸಬೇಕಾಗಿರುವ ಇನ್ನೊಂದು ಮುಖ್ಯಾಂಶವೆಂದರೆ, ಈಗಾಗಲೇ ಸೂಚಿಸಿರುವಂತೆ ದಾಸಿಮಯ್ಯಾದಿ ಶರಣರು ಬ್ರಹ್ಮಶಿವ ಹಾಗೂ ನಯಸೇನರಿಂದ ಪ್ರಭಾವಿತರಾಗಿದ್ದಾರೆಂಬುದಕ್ಕಿಂತ, ಈ ಶರಣರಿಂದಲೇ ಬ್ರಹ್ಮ-ನಯಸೇನರು ಪ್ರಭಾವಿತರಾಗಿರಬೇಕೆಂದು ಅಭಿಪ್ರಾಯಿಸುವುದೇ ಬಹಳ ಮಟ್ಟಿಗೆ ಸೂಕ್ತವೆಂದು ತೋರುತ್ತದೆ. ಆದ್ದರಿಂದ, ಶರಣ ವೇದಿಕೆಯಲ್ಲಿ ಸಂಘಟಿತರಾದ ದಲಿತ ವರ್ಗದ ಜನರ ಬದುಕು, ಭಾಷೆ, ಆಲೋಚನೆ ಹಾಗೂ ಜನಸಾಮಾನ್ಯರ ಜಾಗೃತಿಯನ್ನೇ ತನ್ನ ಅಂತಿಮ ಗುರಿಯನ್ನಾಗಿ ಹೊಂದಿರುವ, ದಲಿತರ ಬಂಡಾಯ ಮನೋಧರ್ಮ ಹಾಗೂ ತತ್ಫಲವಾದ ಅಭಿವ್ಯಕ್ತಿ ಕನ್ನಡ ಸಾಹಿತ್ಯದಲ್ಲಿ ಬಹುಶಃ ಆದಿಕವಿ ಪಂಪನಿಗಿಂತಲೂ ಪ್ರಾಚೀನವಿರಬೇಕೆಂಬ ಪ್ರೊ|| ಬಸವರಾಜುರವರ ಅಭಿಪ್ರಾಯವನ್ನು, ಅಧಿಕೃತವಾಗಿ ಅಲ್ಲಗಳೆಯಲು ಆಧಾರಗಳಿರುವಂತೆ ತೋರುವುದಿಲ್ಲ. ಹೀಗೆ, ಇಷ್ಟನ್ನೆಲ್ಲಾ ಚರ್ಚಿಸಿದ ಮೇಲೂ, ಕೊನೆಗಾಣದಿರುವ ಒಂದು ಸಮಸ್ಯೆಯೆಂದರೆ, ಜೇಡರ ದಾಸಿಮಯ್ಯನನ್ನು ಕುರಿತ ಗೊಬ್ಬೂರು ಮುಂತಾದ ಕೆಲವು ಶಾಸನಗಳು ಒಂದೆಡೆ ದಾರಿ ತಪ್ಪಿಸಿದರೆ, ಹರಿಹರ ಮತ್ತು ಭೀಮಕವಿಗಳು 'ಜೇಡರ' ಹಾಗೂ 'ದೇವರ' ಎಂಬ ಎರಡು ಹೆಸರುಗಳನ್ನು ಅತ್ಯಂತ ಎಚ್ಚರದಿಂದ ಬೇರೆ ಬೇರೆಯಾಗಿಯೇ ಬಳಸಿರುವುದು ಇನ್ನೊಂದೆಡೆ ದಾರಿ ತಪ್ಪಿಸುತ್ತಿರುವುದಕ್ಕೆ ಖಚಿತವಾದ ಕಾರಣಗಳನ್ನು ಇನ್ನೂ ಕಾಣಬಹುದಾಗಿದೆ. ಆದರೆ, ದಲಿತರು ಮುನ್ನಡೆಸಿಕೊಂಡು ಬಂದಿರುವ ಹಾಗೂ ಕಾಲಕಾಲಕ್ಕೆ ವೈಚಾರಿಕ ಪರಿವರ್ತನೆಗೆ ಪಕ್ಕಾಗಿರುವ ಈ ಶಿವರಾಧನೆಯು ಸಂಸ್ಕೃತಿ ವೇದಗಳಷ್ಟೇ ಅಥವಾ ಅವುಗಳಿಗಿಂತಲೂ ಪ್ರಾಚೀನನೆಂಬುದು ಹಲವಾರು ವಿದ್ವಾಂಸರಿಂದ ಈಗಾಗಲೇ ಬೆಳಕಿಗೆ ಬಂದಿರುವುದನ್ನು ಕಾಣಬಹುದಾಗಿದೆ.[1]

[ಮುಂದುವರೆಯುವುದು

1 (i) Dr. C. V. Narayan Ayyar. Origin and early History of Saivism in South India. First two chapter - 1936.
(ii) Dr. V. Paranjoth . Saiva Siddhantha. II & III Chapters - 954.
(iii) Prof. R. Ramanujachari. Saiva Siddhantha. P. 107-12 - 1948.
(iv) Dr. G. Subramanya Pillai. Introduction and History of Saiva Siddhantha. P. 2-1948.
(v) John-H-Piet-Saiva Siddhantha Philosophy-Introduction-1957.
(vi) ಡಾ. ಎಂ. ಚಿದಾನಂದಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, 6ನೇ ಅಧ್ಯಾಯ - 1979.

# ಮೌನ ಮುರಿದು ಮಾತನಾಡಿದ 'We-7' ಕಲಾಪ್ರದರ್ಶನ

* ಕೆ. ವಿ. ಸುಬ್ರಮಣ್ಯ

ಪ್ರತಿಭಾನವೇ ಕಲಾಭಿವ್ಯಕ್ತಿ ಎನ್ನಿಸುವಂಥ ವಿಶಿಷ್ಟತೆಯನ್ನು ಹೊಂದಿದ್ದ ಹಲವಾರು ಉತ್ತಮ ಕೃತಿಗಳನ್ನೊಳಗೊಂಡ 'ವಿ-ಸೆವೆನ್' ಹೆಸರಿನ ಖ್ಯಾತ ಹಾಗೂ ಉದಯೋನ್ಮುಖ ಕಲಾವಿದರ ಹೊಸ ಗುಂಪಿನ ಕಲಾಪ್ರದರ್ಶನ ಬೆಂಗಳೂರಿನ ವೆಂಕಟಪ್ಪ ಚಿತ್ರ ಶಾಲೆಯಲ್ಲಿ (ಏಪ್ರಿಲ್, 25-30) ನಡೆಯಿತು. ಕಲಾವಿದ ಜಿ. ಎಸ್. ಶೆಣೈರೊಂದಿಗೆ, ಶ್ರೀಕಾಂತಶೆಟ್ಟಿ, ಎಂ. ಬಿ ಪಾಟೀಲ್, ಪ್ರತಾಪಸಿಂಹ, ಭಾಸ್ಕರರಾವ್, ಈಶ್ವರಪತ್ತಾರರಲ್ಲದೆ ಮದ್ರಾಸಿನ ಬಳಿಯ ಚೋಳಮಂಡಲ (ಕಲಾವಿದರ ಹಳ್ಳಿ)ದಲ್ಲಿ ವಾಸವಾಗಿರುವ ಕರ್ನಾಟಕದ ವಾಸುದೇವ್‌ರವರುಗಳ ಕಲಾಕೃತಿಗಳು ಪ್ರದರ್ಶನದಲ್ಲಿದ್ದುವಲ್ಲದೆ, ಪ್ರತಿದಿನ ಒಬ್ಬೊಬ್ಬ ಕಲಾವಿದರಿಂದ ಪ್ರಾತ್ಯಕ್ಷಿಕೆ (demon-stration) ಯನ್ನು ಏರ್ಪಡಿಸಲಾಗಿತ್ತು. ಕಲಾಪ್ರದರ್ಶನ ನೋಡುವ ಕಲಾ ಅಭಿಮಾನಿಗಳಿಗೆ, ಕೃತಿಯ ಸೃಷ್ಟಿಯ ರಹಸ್ಯಗಳು ಹಾಗೂ ಕೃತಿ ನಿರ್ಮಾಣದ ವಿವಿಧ ಹಂತಗಳನ್ನು ಪರಿಚಯಿಸುವುದರ ಮೂಲಕ ಕಲಾಪ್ರದರ್ಶನಗಳಿಗೆ ಒಂದು ಹೊಸ ಆಯಾಮವನ್ನು ಈ ಗುಂಪಿನ ಕಲಾವಿದರು ಕೊಟ್ಟದ್ದು ಗಮನಾರ್ಹ.

ಪ್ರದರ್ಶನಾಂಗಣದ ಕಲಾಕೃತಿಗಳ ನಿಗೂಢ ಮೌನ, ಏಕಾಂತತೆ ಇತ್ಯಾದಿಗಳನ್ನು ನಿರ್ದಿಷ್ಟ ಬಿಂದುವಿನ ದೂರದಲ್ಲಿ ನಿಂತು ನೋಡಿದಾಗ, ಕಾಣುವ ಬಣ್ಣದ ಛಾಯೆಗಳು ಬೇಸಗಿಯ ಬಿಸಿಯಲ್ಲಿಯೂ ನಮ್ಮನ್ನು ತಮ್ಮ ಮೌನದ ಕಟ್ಟೆಯೊಡೆದು ಪ್ರತಿಕ್ರಿಯಿಸಲು ಪ್ರೇರೇಪಿಸಿದ ಕೃತಿಗಳು ಹಲವಾರು.

---

ರಾಜಧಾನಿಯಲ್ಲಿ ಇತ್ತೀಚೆಗೆ ಪ್ರದರ್ಶಿತವಾಗುತ್ತಿರುವ ಚಿತ್ರಕಲಾ ಪ್ರದರ್ಶನ (Art Exhibition)ಗಳು, ಚಿತ್ರಕಲೆ ಬಗ್ಗೆ ಆಸಕ್ತಿ ಇರುವವರಿಗೆ ಸುಗ್ಗಿಯಾಗಿ ಕಾಣಿಸಿಕೊಂಡಿವೆ. ಈ ಕಲಾ ಮಾಧ್ಯಮ ಹೆಚ್ಚು ಹೆಚ್ಚಾಗಿ ಜನತೆಗೆ ತಲುಪಬೇಕಾದ ಜರೂರಿ ಬಗ್ಗೆ ನಮಗೆ ಕಾಳಜಿಯಿದೆ. ಆ ಕುರಿತು ಪತ್ರಿಕೆ ಚಿತ್ರಕಲಾ ಪ್ರದರ್ಶನದ ವರದಿ, ಟೀಕೆ-ಟಿಪ್ಪಣಿ, ಚಿತ್ರ ಲೇಖನಗಳನ್ನು ಪ್ರಕಟಿಸುತ್ತದೆ. ವೆಂಕಟಪ್ಪ ಕಲಾ ಶಾಲೆಯಲ್ಲಿ ನಡೆದ 'We-7' ಪ್ರದರ್ಶನದ ಬಗ್ಗೆ ಕಲಾವಿದ, ಲೇಖಕ ಸುಬ್ರಮಣ್ಯ ಬರೆದ ಸಮೀಕ್ಷೆ ಇಲ್ಲಿದೆ.

---

# We-7 ಕಲಾ ಪ್ರದರ್ಶನದ ಆಯ್ದ ಚಿತ್ರಗಳು



' ಗ್ರಾಮೀಣ ಮಹಿಳೆ ' ಕಲೆ : ಎಂ. ಬಿ. ಪಾಟೀಲ



' ಸಂಯೋಗ ' ಕಲೆ : ಪ್ರತಾಪಸಿಂಹ



‘ ಪರಂಪರೆ ?’ ಕಲೆ : ಈಶ್ವರ ಪತ್ತಾರ

ಶ್ರೀಕಾಂತಶೆಟ್ಟಿಯವರ ತೈಲವರ್ಣ ಕೃತಿಗಳಲ್ಲಿ ಕರಾವಳಿ ತೀರಪ್ರದೇಶಗಳ, ಒಂದು ಜನಾಂಗದ ಜೀವನದ, ವಾಸ್ತವಿಕ ವಸ್ತು ಚಿತ್ರಣವನ್ನು ಕಣ್ಣಿಗೆ ಹಿತವಾದ ಬಣ್ಣದ ಕಲ್ಪನೆ, ಛಾಯೆ ಮತ್ತು ಬೆಳಕಿನ ಸಾಮರಸ್ಯಗಳ ಸುಸಂಬದ್ಧ – ಸಮತೋಲಿತಯು ದೃಶ್ಯಗಳಲ್ಲಿ, ಆಕಾರಗಳ ಜೋಡಣಾ ಪ್ರವೃತ್ತಿ ಆಕರ್ಷಕವಾಗಿತ್ತು. ಅಂದವಾಗಿ ಅಲಂಕಾರ ಮಾಡಿಕೊಂಡು ಮಾವಿನಹಣ್ಣನ್ನು ಮಾರುತ್ತಿರುವ, ಕನಸುಗಾರಿಕೆಯಿಂದ ವೀಳೆಯದೆಲೆ ಹಾಕುತ್ತಿರುವ, ರಣರಣ ಬಿಸಿಲಿನಲ್ಲಿ ಮೀನು ಮಾರುತ್ತಿರುವ ಹೆಣ್ಣುಗಳೇ ಪ್ರಧಾನ ವಸ್ತುವಾಗಿದ್ದ ಕೃತಿಗಳಲ್ಲಿ ಹೆಣ್ಣಿನ ಸಹಜ ಭಾವನೆ ಹಾಗೂ ಕಾಮನೆಗಳು ಕಲಾತ್ಮಕವಾಗಿದ್ದವು. ಗೋಡೆಗಳ ಮೇಲಿನ ರಂಗೋಲಿ, ಕಿಟಕಿಗಳ ತಡಿಕೆ, ಮೈ ತುಂಬ ತೊಟ್ಟಿರುವ ಚಿತ್ತಾರದ ಒಡವೆಗಳು, ಸೀರೆ ಉಟ್ಟಿರುವ ರೀತಿ ಇವುಗಳನ್ನೆಲ್ಲಾ ಗಮನಿಸಿದಾಗ, ಚಾರಿತ್ರಿಕ ಮೌಲ್ಯಗಳನ್ನು ಕೃತಿಗಳಲ್ಲಿ ಉಳಿಸಿರುವುದು ಉಲ್ಲೇಖಾರ್ಹ. ಆ ಜನರಲ್ಲಿ ಸಾಮಾನ್ಯವಾದ ರೋಷ, ಆವೇಷ, ದ್ವೇಷ, ಸ್ಪರ್ಧೆ ಇತ್ಯಾದಿಗಳಿಗೆ ಸಾಂಕೇತಿಕವಾಗಿ ಚಿತ್ರಿಸಿರುವ ಹುಂಜಗಳ ಹೋರಾಟದ ಕೃತಿಗಳನ್ನು ಗಮನಿಸಿದಾಗ ಅಲ್ಲಿನ ಬಣ್ಣಗಳು ನಮ್ಮನ್ನು ತಣ್ಣಗೆ ಮಾಡುತ್ತವೆ.

ತಮ್ಮ ಎಂದಿನ ವೈಯಕ್ತಿಕತೆಯ ಧಾತು ಉಬ್ಬು ವಿನ್ಯಾಸ (Metal relief)ದ ಕೃತಿಯೊಂದರ ಜೊತೆಗೆ ಕರ್ನಾಟಕದಲ್ಲಿ ಪ್ರಥಮ ಬಾರಿಗೆ ಫೈಬರ್ ಗಾಜಿನ ಫಲಕದ ಉಬ್ಬು ವಿನ್ಯಾಸದ ಕೃತಿಗಳನ್ನು ಇತ್ತೀಚೆಗೆ ಸೃಷ್ಟಿಸುತ್ತಿರುವ ಜಿ. ಎಸ್. ಶೆಣೈ ತಮ್ಮ ಎಂದಿನ ಶೈಲಿಯಲ್ಲೇ ಎರಡು ಗಣಪತಿಗಳನ್ನು ಸೃಷ್ಟಿಸಿ, ಮೊದಲ ಬಾರಿಗೆ ಒಂದು ಕೃತಿಯ ಫಲಕದ ಪೂರ್ಣ ಆಕಾರಗಳಿಗೆ ವರ್ಣ ಹರಡಿ ಸೆರಾಮಿಕ್ ಪ್ರಭಾವ ಉಂಟು ಮಾಡಿದ್ದಾರೆ. ಈ ಮಾಧ್ಯಮದ ಕೃತಿಗಳು ಅವರ ಅಲ್ಯೂಮಿನಿಯಂ ಕೃತಿಗಳಂತೆ ಹೊಳಪನ್ನು ಹೊಂದಿಲ್ಲ. ಪ್ರದರ್ಶನದಲ್ಲಿದ್ದ ಇವರ ಎರಡು ಕೃತಿ ತೈಲವರ್ಣ ಕೃತಿಗಳು ಅತ್ಯಂತ ಆಕರ್ಷಕವಾಗಿದ್ದು, ವರ್ಣಗಳನ್ನು ಧಾರೆಧಾರೆಯಾಗಿ ಹರಿಸಿ, ವಿಶೇಷ ತಂತ್ರದಿಂದ ಬಂಡೆಗಳ ಆಕಾರಗಳನ್ನು, ಆಳಗನ್ನು ಸೃಷ್ಟಿಸಿದ್ದು, ಹಾಳು ಕಟ್ಟಡಗಳನ್ನು ಸಾಂಕೇತಿಕವಾಗಿ ಚಿತ್ರಿಸಿ ಈ ಕೃತಿಗಳಲ್ಲಿ ಹಾಳು ಹಂಪೆಯ ಕಲ್ಪನೆಯನ್ನು ಉಂಟು ಮಾಡಿದ್ದು ; ಕಲಾವಿದರು ಇತ್ತೀಚೆಗೆ ಹಂಪೆಯ ಪ್ರಭಾವದಿಂದ ಹೊರ ಬರಲಾರದೆ ಅಲ್ಲಿನ ದೃಶ್ಯ ವೈಭವಗಳಲ್ಲಿ ಪೂರ್ಣವಾಗಿ ಮುಳುಗಿರುವ ಹಾಗಿದೆ.

ಪ್ರದರ್ಶನದ ಆರು ಬೃಹತ್ ಕೃತಿಗಳ ಕಲಾವಿದ ಈಶ್ವರ ಪತ್ತಾರರ ಬ್ಲೋಟಾರ್ಚ್ ಬಳಸಿ ಮರದ ಹಲಗೆಯ ಮೇಲೆ ಅಗತ್ಯವಿರುವಲ್ಲಿ ಸುಟ್ಟು ಆಕರ್ಷಕ ಅಲಂಕರಣ ವಿನ್ಯಾಸದ ಕೃತಿಗಳನ್ನು ಸೃಷ್ಟಿಸಿದ್ದು, ಜಾನಪದ ದೇವತೆಗಳನ್ನೇ ಸಾಂಕೇತಿಕವಾಗಿ ಬಳಸಿದ್ದಾರೆ. ಈ ತಂತ್ರದಲ್ಲಿನ ಪೂರ್ಣ ಪ್ರಯೋಜನ ಪಡೆಯದ ಕೃತಿಗಳು ಇನ್ನೂ ಪ್ರಯೋಗದ ಸ್ಥಿತಿಯಲ್ಲಿಯೇ ಉಳಿಯುತ್ತವೆ.

ಗ್ರಾಮ್ಯ ಹಿನ್ನೆಲೆಯ ಹೆಣ್ಣಿನ ಮನದಾಳದ ಭಾವನೆಗಳ ತುಡಿತಗಳನ್ನು ಎದ್ದು ಕಾಣುವ ಬಣ್ಣಗಳಲ್ಲಿ ತಮ್ಮ ತೈಲವರ್ಣ ಕೃತಿಗಳಲ್ಲಿ ಚಿತ್ರಿಸಿರುವ ಕಲಾವಿದ ಎಂ. ಬಿ ಪಾಟೀಲರ ಮೇಲೆ ತಮ್ಮ ವೃತ್ತಿಯ ವಾರ್ತಾ ಮತ್ತು ಪ್ರಚಾರ ಇಲಾಖೆಯ ಹಿನ್ನೆಲೆಯ ಪರಿಸರದ ಗಾಢ ಪ್ರಭಾವವಿದೆ. ಅವಕಾಶದಲ್ಲಿ ಶಕ್ತಿಯುತ ರೇಖಾಕೃತಿಗಳ ಕೇಂದ್ರೀಕೃತ ದೃಶ್ಯ ಸಂಯೋಜನೆಯನ್ನು ಉತ್ತಮವಾಗಿ ಸಾಧಿಸಿದ್ದಾರೆ. ಮನಸ್ಸಿನ ಚಂಚಲತೆಯ ಸಾಂಕೇತಿಕ ಮೀನುಗಳ ಕೃತಿಯ ಕಲಾವಿದ ಪ್ರತಾಪಸಿಂಹ, ತಮ್ಮ ಎರಡು ಅಮೂರ್ತ ಶೈಲಿಯ ಕಲಾಕೃತಿಗಳಲ್ಲಿ ತಮ್ಮ ಪ್ರತಿಭೆಯನ್ನು ವಿವರಣಾತ್ಮಕ ಸಂತುಲನೆಗಳಿಂದ ಎದ್ದು ಕಾಣುವ ವರ್ಣ ಹಾಗೂ ಬೆಳಕಿನ ಸಾಮರಸ್ಯದ ವರ್ಣ ರಂಜಿತ ಭ್ರಮಾಲೋಕದ ಸೃಷ್ಟಿಯನ್ನು ಮಾಡಿದ್ದರೆ, ತಮ್ಮ ಶಿಲ್ಪಗಳ ವಸ್ತುವಿನ ರೇಖಾಕೃತಿಗಳನ್ನು ಭಾಸ್ಕರರಾವ್ ಸೃಷ್ಟಿಸಿದ್ದಾರೆ. ಪ್ರದರ್ಶನದಲ್ಲಿ ಖ್ಯಾತ ಕಲಾವಿದ ವಾಸುದೇವ್‌ರ ಈಗಾಗಲೇ ಪರಿಚಿತ 'ವೃಕ್ಷ' ಮಾಲೆಯ ತಾಮ್ರದ ಫಲಕಗಳ ಉಬ್ಬು ವಿನ್ಯಾಸದ ಕೃತಿಗಳೂ ಇದ್ದವು

ಒಂದು ವಾರ ಕಾಲ ನಡೆದ ಪ್ರದರ್ಶನಾವಧಿಯಲ್ಲಿ ಹೆಚ್ಚಿನ ಸಂಖ್ಯೆಯ ಕಲಾಭಿಮಾನಿಗಳು ಬಂದು ಹೋಗುತ್ತಿದ್ದುದು ಸ್ವಲ್ಪ ಮಟ್ಟಿಗೆ ಪ್ರತಿದಿನ ಕಲಾವಿದರು ನಡೆಸಿಕೊಡುತ್ತಿದ್ದ ಪ್ರಾತ್ಯಕ್ಷಿಕೆ ಕಾರ್ಯಕ್ರಮಗಳಿಂದ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆ ಅವರೂ ಮುಖ್ಯ ಅತಿಥಿಗಳಾಗಿ ಕಾರ್ಯಕ್ರಮ ವೀಕ್ಷಣೆಗೆ ಆಗಮಿಸಿದ್ದರು

ಆರು ಸಂಜೆಗಳಲ್ಲೂ ವಾಸುದೇವ್‌ರವರನ್ನು ಬಿಟ್ಟು ಉಳಿದೆಲ್ಲರೂ ಕಲಾಕೃತಿಗಳನ್ನು ಸ್ಥಳದಲ್ಲಿಯೇ ಸೃಷ್ಟಿಸಿದರು. ಶೆಣೈರವರು ತಮ್ಮ ಪ್ರೀತಿಯ ಜಲವರ್ಣ ಮಾಧ್ಯಮದಲ್ಲಿ ಎಂದಿನಂತೆ ಪ್ರಾವೀಣ್ಯ ಪ್ರದರ್ಶಿಸಿ ವೇಗವಾಗಿ ಕುಂಚವನ್ನು ಬಳಸಿ ವಾಷ್ ತಂತ್ರದಲ್ಲಿ ಪ್ರಕೃತಿ ಚಿತ್ರವೊಂದನ್ನು ರಚಿಸಿದರು. ಮರು ದಿನಗಳಲ್ಲಿ ಈಶ್ವರ ಪತ್ತಾರರು ತೈಲವರ್ಣದಲ್ಲಿ ಭೂದೃಶ್ಯವೊಂದನ್ನು, ಎಂ. ಬಿ. ಪಾಟೀಲರು ಕ್ಯಾಪ್ಲಿನ್ ಕಂಪೆನಿಯ ರವಿಯವರ ತೈಲವರ್ಣದ ಭಾವಚಿತ್ರವೊಂದನ್ನು, ಪ್ರತಾಪಸಿಂಹ ಅಮೂರ್ತ ಶೈಲಿಯ ಕೃತಿಯೊಂದನ್ನು, ಭಾಸ್ಕರರಾವ್ ರೂಪರೇಖಾಚಿತ್ರ (ಸ್ಕೆಚ್)ಗಳನ್ನು ಸೃಷ್ಟಿಸಿ ತೋರಿಸಿದರು. ಈ ಎಲ್ಲ ಸಂದರ್ಭಗಳಲ್ಲೂ ಕಲಾವಿದರು, ಪತ್ರಕರ್ತರು ಮತ್ತು ಸಾಹಿತಿಗಳೂ ಹಾಜರಿದ್ದುದು ಒಂದು ವಿಶೇಷ. ★

---

ಸೌಂದರ್ಯ : ಲಂಕೇಶ್ ದೃಷ್ಟಿಯಲ್ಲಿ....

ನನ್ನಂಥ ಸರಳನ ಪ್ರಕಾರ ಮಾನಸಿಕ, ದೈಹಿಕ ಆರೋಗ್ಯವುಳ್ಳ ಎಲ್ಲರೂ ಸುಂದರ, ಸುಂದರಿಯರು. ಇನ್ನೂ ಆಳಕ್ಕೆ ಹೋದರೆ, ವ್ಯಕ್ತಿತ್ವವುಳ್ಳ, ಸುತ್ತಣ ಜಗತ್ತಿಗೆ ಸೂಕ್ಷ್ಮವಾಗಿ, ತೀವ್ರವಾಗಿ ಸ್ಪಂದಿಸಬಲ್ಲ, ಇವೆಲ್ಲವುಗಳಿಂದಾಗಿ ಪ್ರೀತಿಸುವ ಮತ್ತು ಪ್ರೀತಿಸಲ್ಪಡುವ ಗುಣಗಳನ್ನುಳ್ಳ ಎಲ್ಲರೂ ರೂಪವಂತರು.

—ಪಿ. ಲಂಕೇಶ್, 5-5-85



ನಾಟಕೋತ್ಸವ....
ತಾಯಿ....
ಚಿಕವೀರ ರಾಜೇಂದ್ರ
ರಂಗಭೂಮಿಕ....

## ಕಾರಂತರ ನೇತೃತ್ವದ ಭೂಪಾಲ ರೆಪರ್ಟರಿ : ಒಂದು ನೆನಪು

ಕೆಲವರು ಯಾವಾಗಲೂ ಸುದ್ದಿಯಲ್ಲಿರುತ್ತಾರೆ. ಹಲವರು ಅಪರೂಪಕ್ಕೊಮ್ಮೆ ಅಷ್ಟಿಷ್ಟು ಸುದ್ದಿ ಮಾಡಿ ಕಣ್ಮರೆಯಾಗುತ್ತಾರೆ. ಪತ್ರಿಕೆಗಳೂ ಹಲವು ಬಾರಿ ಸುದ್ದಿಗೆ ಪ್ರಾಶಸ್ತ್ಯ, ಪ್ರಚಾರ ಕೊಡುತ್ತವೆ. ಸಾರ್ವಜನಿಕರಲ್ಲಿ ಇಂಥ ಸುದ್ದಿ ಸಮಾಚಾರ ಕೆಲವು ದಿನಗಳಾದರೂ ನೆನಪಿನಲ್ಲಿ ಉಳಿಯುತ್ತವೆ. ಈ ಸುದ್ದಿಯ ಪಟ್ಟಿಯಲ್ಲಿ ರಾಜಕಾರಣಿ, ನಟ-ನಟಿಯರು, ಸಾಹಿತಿಗಳು ಸೇರುತ್ತಾರೆ.

ಇತ್ತೀಚೆಗೆ ಸುದ್ದಿ ಮಾಡಿದವರು ಮತ್ತು ಸುದ್ದಿಯಲ್ಲಿದ್ದವರು – ಬಿ. ವಿ. ಕಾರಂತರು. ಕನ್ನಡ ರಂಗಭೂಮಿ ಮತ್ತು ಚಲನಚಿತ್ರ ಕ್ಷೇತ್ರಕ್ಕೆ ಅಪರೂಪದ್ದನ್ನೇ 'ವಿಶೇಷ' ಕೊಡುಗೆಯಾಗಿ ಕೊಟ್ಟ ಕಾರಂತರು ಏನೇ ವಿವಾದ ಎಬ್ಬಿಸಿರಲಿ; ಭಿನ್ನಾಭಿಪ್ರಾಯಗಳನ್ನಿಟ್ಟುಕೊಂಡಿರಲಿ, ಭೂಪಾಲದ ರೆಪರ್ಟರಿ (ಹಿಂದಿ ನಾಟಕಗಳ) ತಂಡವನ್ನು ರಾಜಧಾನಿಗೆ ಕರೆ ತಂದು ಮಿಂಚಿಸಿದ್ದಾರೆ. ಜೊತೆಗೆ ತಮ್ಮ ಪ್ರತಿಭೆಯ ಬಗ್ಗೆ ಎರಡು ಮಾತಿಲ್ಲದಂತೆ ಕಾರ್ಯ ನಿರ್ವಹಿಸಿದ್ದಾರೆ. ಇದರಿಂದಾಗಿ, ರಂಗ ಪ್ರೇಮಿಗಳಿಂದ ಒಳ್ಳೆಯ ಸರ್ಟಿಫಿಕೇಟ್ ಪಡೆದು 'ನಮ್ಮ ಕಾರಂತರು' ಎಂದು ಎದೆಯುಬ್ಬಿಸಿ ಮಾತಾಡುವಂತೆ ಮಾಡಿದ್ದಾರೆ. ಪತ್ರಿಕೆಗಳೂ ಎಂದೂ ಕೊಡದಷ್ಟು ಪ್ರಚಾರ ಕೊಟ್ಟಿವೆ. ಸಂದರ್ಶನಗಳನ್ನಂತೂ ಪೈಪೋಟಿ ಮಾಡಿ ಪ್ರಕಟಿಸಿವೆ.

ಇನ್ನೂ ಹಲವು ಕಾಲವಾದರೂ ಕನ್ನಡ ರಂಗಭೂಮಿ ಮೇಲೆ ಪ್ರಭಾವ ಬೀರುವಂತಹ ಪ್ರಭಾವಶಾಲಿ ಮತ್ತು ಶಕ್ತಿಯುತ ನಾಟಕಗಳನ್ನು ಭೂಪಾಲ ರಂಗಮಂಡಲ ತಂಡದವರು ಕೊಟ್ಟಿದ್ದಾರೆನ್ನಲು ಯಾವ ಅನುಮಾನವೂ ಇಲ್ಲ. ನಟನೆ – ಹಾಡುಗಳ ಮೂಲಕ ರಂಗಪ್ರೇಮಿಗಳ ಮನದಲ್ಲಿ [illegible] ಸದ್ದು ಮಾಡಿ ಹೋದ ಕಾರಂತ ನೇತೃತ್ವದ ಈ ತಂಡ ಕೆಲಕಾಲವಾದರೂ ಚರ್ಚೆಯಾಗುತ್ತದೆ. ಜೊತೆಗೆ ಕನ್ನಡ ರಂಗಭೂಮಿ ಸಾಧಿಸಬೇಕಾದ್ದು ಬೇಕಾದಷ್ಟಿದೆ ಎನ್ನುವುದನ್ನು ತೋರಿಸಿಕೊಟ್ಟಿದೆ. ಆ ಸಾಧನೆಯತ್ತ ನಮ್ಮೆಲ್ಲರ ಗಮನ ಕೂಡ.

ನಮ್ಮ ಈ ಬರಹ ಓದುವ ಹೊತ್ತಿಗೆ ಕಾರಂತರ ಕೂಸಿನ ಪರಿಚಯ ಸಾಕಷ್ಟು ಆಗಿರುವುದರಿಂದ; ಎಲ್ಲಾ ಪತ್ರಿಕೆಗಳೂ ಮಾಡಿದ ನಾಟಕ ವಿಮರ್ಶೆಯನ್ನೇ ನಾವೂ ಮಾಡದೆ ಏನಾದರೂ ವಿಶೇಷ ಹೇಳುವುದೇ ಮುಖ್ಯ ಉದ್ದೇಶಗಳಲ್ಲೊಂದೆಂದು ಭಾವಿಸಿ ಈ ಮಾತುಗಳನ್ನೇಳುತ್ತಿದ್ದೇವೆ.

ಆರು ನಾಟಕಗಳ ವೈವಿಧ್ಯಮಯತೆ (ವಸ್ತುವಿನಲ್ಲಿ) ನಾಟಕ ಕೊಟ್ಟ ಅನುಭವದ ಜೊತೆಗೆ ಬೆಂಗಳೂರಿನ ಬೇಸಗೆಯ ವಾತಾವರಣದಲ್ಲಾದ ಬದಲಾವಣೆ (ಗಾಳಿ, ಧೂಳು, ಮಳೆಯ ತುಂತುರು ಇತ್ಯಾದಿ) ರಂಗಪ್ರೇಮಿಗಳಿಗೆ ವಿಶೇಷ ನೆನಪನ್ನೇ ಕೊಟ್ಟಿದೆ.

ನಾಟಕೋತ್ಸವ ಮುಗಿದ ಹಲವು ದಿನ ನಾಟಕಗಳ ದೃಶ್ಯಗಳು, ಚಮತ್ಕಾರದ ನಟನೆ, ಕುಣಿತಗಳು ಕಣ್ಣಮುಂದೆ ಹಾಯ್ದು ಹೋಗಿದ್ದು ನಿಜ. ನಾಟಕದ ಯಾವುದೋ ಅಂಶ ಮತ್ತೊಂದು ಹೊಸ ಅರ್ಥವನ್ನು ಹುಟ್ಟಿಸುತ್ತಿತ್ತು. ಇಂಥ ನಟನೆಯ ನೆನಪಲ್ಲಿನ ರೀತಿಯ 'ತಯಾರಿ'ಯ ಹಿಂದಿನ ಶ್ರಮದ ಬಗ್ಗೆ (ಅದು ವೈಯಕ್ತಿಕ ಅಥವಾ group work ಯಾವುದೇ ಆಗಿರಲಿ) ನಾವೆಲ್ಲಾ ಯೋಚಿಸುವಂತಿದ್ದುದು 'ರೆಪರ್ಟರಿ' ಬಗ್ಗೆ ತಾಳುವ ಅಭಿಮಾನ ಕೂಡ.

'ರಂಗಭೂಮಿಗೆ ತೀರ ಹೊಸಬರನ್ನು (ಅನನುಭವಿಗಳನ್ನೇ) ತರಬೇತಿಯಲ್ಲಿ ತೊಡಗಿಸಿಕೊಂಡರೆ ಹೊಸತಾದ, ಉತ್ತಮವಾದ ಯಶಸ್ಸನ್ನು ಹೊರಗೆಡಹಲು ಸಾಧ್ಯ. ಹಾಗೇ ನಾನು ಮಾಡುತ್ತಿರುವುದೂ ಸಹಾ'— ಎಂಬ ಮಾತನ್ನು ಕಾರಂತರು ಉಚ್ಚರಿಸಿರುವುದನ್ನು ನೆನೆದು, ಅವರು 'ತಯಾರಿ' ಮಾಡಿದ ನಟರ ಪ್ರತಿಭೆ ಬಗ್ಗೆ ಹೆಮ್ಮೆಯಿಂದ ಅವರಿಳಿಸಿದ ಕೃತಿ ಕುರಿತು ಹೇಳಿಕೊಳ್ಳಬಹುದು. ನಮಗಂತೂ ಆಶ್ಚರ್ಯ ಆದದ್ದು— ರಂಗಮಂಡಲದ ಕೆಲವು ನಟರು ಅಕ್ಷರ ಜ್ಞಾನವನ್ನೇ ತಿಳಿಯದವರು! ಅಂದಾಗ.

ರಂಗಭೂಮಿಗೆ ತೊಡಗಿಸಿಕೊಂಡ ಕಾರಂತರ ಕೈ ಕುಸುರಿ ಕೆಲಸವನ್ನು 'ಮರಳುಗಾಡಿನ ಒಯಾಸಿಸ್' ಎಂದು ಕರೆಯಬಹುದು. ಏಕೆಂದರೆ ಅವರು ಹೇಳುವ 'ಅನನುಭವಿ'ಗಳು ಆದರ್ಶ ನಟನೆಯನ್ನು ಕೊಟ್ಟವರಾದ್ದರಿಂದ ನಮಗೆ ಸಹಜವಾಗೇ ಬೆನ್ನು ತಟ್ಟುವಂತಾಗಿದೆ. ಅಭಿನಂದಿಸುವಂತಾಗಿದೆ.

ಆದರೆ, ಕರ್ನಾಟಕದ ಮಟ್ಟಿಗೆ ಒಂದು ಪ್ರಶ್ನೆ ಕಾಡುತ್ತಿದೆ: ಯಾವುದೋ ನಾಟಕ ಅಥವಾ ಸಿನಿಮಾದಲ್ಲಿ ಮಿಂಚಿ ಜನಪ್ರಿಯವಾಗಬೇಕೆಂಬ ಹಂಬಲದ ನಮ್ಮ ನಟರಂತೆ, 'ನಾವೂ ಏಕೆ ಪ್ರಯತ್ನ ಮಾಡಬಾರದು?' ಎಂಬ ಪ್ರತಿಕ್ರಿಯಾತ್ಮಕ ಪ್ರಯತ್ನ ಇಲ್ಲಿನ ರಂಗಕರ್ಮಿಗಳಲ್ಲಿ, ಪರಿಣತ ಅಥವಾ ತಜ್ಞರಲ್ಲಿ ಎದ್ದಿರಬಹುದೆ? ಆದರದು ಹೊಡೆತಕ್ಕೆ ತಕ್ಷಣದ ಪ್ರತಿ ಹೊಡೆತವಾಗದೇ, ನಿಧಾನವಾಗಿಯಾದರೂ, ಪರಿಪೂರ್ಣ

ವಾಗಿ ಪ್ರಾಯೋಗಿಕವಾಗಿ ಬರಲೆಂದು ಆಶಯ ಹೊಂದಬಹುದೆ ? ಇಂಥ ಒಂದೆರಡು ಪ್ರಶ್ನೆಗಳಿಗೆ ಉತ್ತರದ ಬೆನ್ನು ಹತ್ತುವುದು ; ಮತ್ತೆ ಪ್ರಶ್ನೆ ಎದುರಿಸಿ ಸಮಸ್ಯೆಗಳನ್ನು ತಂದುಕೊಳ್ಳುವುದು ರಂಗಭೂಮಿ ವಲಯದಲ್ಲಿ ಮಾಮೂಲಾಗುವುದನ್ನು ತಪ್ಪಿಸಿ ಕ್ರಿಯಾತ್ಮಕ ಚಟುವಟಿಕೆಗಳನ್ನು ಕಾಣುವತ್ತ ನಾವೂ ಕುತೂಹಲಿಗಳು ಎಂದಷ್ಟೇ ಹೇಳಬಹುದೇನೋ....

ರೆಪರ್ಟರಿಯ ಎಲ್ಲಾ ನಾಟಕಗಳನ್ನೂ ನೋಡಿದ ನಂತರ ಒಂದು ಮಾತನ್ನಂತೂ ಯಾರಾದರೂ ಉದ್ಗರಿಸಬಹುದು : ಬೆಂಗಳೂರು ಹವ್ಯಾಸಿ ರಂಗಭೂಮಿ ನಟ-ನಟಿಯರು ಮೈ ಚಳಿ ಬಿಟ್ಟು ಅಭಿನಯ ಕಲಿಯುವುದು ; ಪ್ರತಿ ಸನ್ನಿವೇಶಗಳೂ ಲವಲವಿಕೆಯಿಂದ ಕೂಡಿದ ಅಭಿನಯ ಕೊಡುವುದು, ಜೊತೆಗೆ ಅಂಥ ಪಾತ್ರಗಳೂ ನೆನಪಲ್ಲಿ ಉಳಿಯುವುದು ಇತ್ಯಾದಿ ರಂಗಭೂಮಿಯ ಅಪೂರ್ವ ಸಾಧನೆಯನ್ನು ಕಾಣುವ ಇಚ್ಛೆ ನಮ್ಮದಾಗಿದೆ. ಇದೆಲ್ಲವನ್ನೂ ಸಾಧಿಸಿದ ಕೀರ್ತಿ ಭೂಪಾಲ ರೆಪರ್ಟರಿ ತಂಡಕ್ಕಿತ್ತೆಂದು ಯಾರಾದರೂ ಹೇಳಬಹುದು.

ನಾವಿಲ್ಲಿ ಯಾವುದೇ ನಾಟಕದ ಬಗ್ಗೆಯಾಗಲಿ, ಕಲಾವಿದರ ಬಗ್ಗೆಯಾಗಲಿ ಏನೂ ಹೇಳಿಲ್ಲವಾದರೂ ಒಬ್ಬ ನಟನ ಬಗ್ಗೆ ಹೇಳದಿದ್ದರೆ ಈ ರೆಪರ್ಟರಿ ತಂಡಕ್ಕೆ ಅಪಚಾರ ವೆಸಗಿದಂತಾಗುತ್ತದೆ.

ಹಳ್ಳಿಗಾಡಿನಿಂದ ಬಂದು, ಉತ್ತಮ ಅಭಿನಯ ಕಲಿತ ದ್ವಾರಕಾ ಪ್ರಸಾದ ಅನಕ್ಷರಸ್ಥ ! ಈತನ ಪ್ರತಿಭೆಯ ನಿಜವಾದ ರುವಾರಿ ಕಾರಂತರೇ. ಈ ನಟನ ಅಭಿನಯದ ಎಲ್ಲಾ ನಾಟಕಗಳ ದೃಶ್ಯಗಳೂ ನಮ್ಮ ಕಣ್ಣುಮುಂದಿವೆ. 'ಇನ್ ಸಾಫ್ ಕಾ ಫೇರಾ'ದಲ್ಲಿ ಏಲು ನ್ಯಾಯಾಧೀಶನಾಗಿ ಈತ ಕೊಟ್ಟ ಅಭಿನಯ ಅವಿಸ್ಮರಣೀಯ. ನಿಮಿಷಾರ್ಧದಲ್ಲೇ ಈ ನಟ ಏನೆಲ್ಲಾ ಅಭಿನಯಿಸುತ್ತಿದ್ದನೆಂದರೆ, ಊಹೆಗೂ ನಿಲುಕುವುದು ಕಷ್ಟ. ಕೈ, ಕಾಲುಗಳನ್ನು ಆಡಿಸಿ ತೋರಿಸುವುದರಲ್ಲಾಗಲಿ, ಮಾತಿನ ಚಮತ್ಕಾರವನ್ನು ಪ್ರದರ್ಶಿಸುವುದರಲ್ಲಾಗಲಿ ಈತ ಪಳಗಿದ ನಟನಾ ಸಾಮರ್ಥ್ಯ ತೋರಿಸಿದ್ದು ಮೆಚ್ಚಲೇ ಬೇಕು.

ಬೆಂಗಳೂರಿನ ಕೆಲವು ರಂಗತಂಡಗಳು, ಸಂಸ್ಥೆಗಳು 'ಭೂಪಾಲ ರೆಪರ್ಟರಿ' ತಂಡಗಳ ನಾಟಕಗಳನ್ನು ನೋಡಿದ ಮೇಲಾದರೂ ಬೆಳೆಯಲೇಬೇಕಾಗಿದೆ. ಹುಟ್ಟುವ ಮೊದಲೇ ಸಾಯುವ ಅಥವಾ ಹುಟ್ಟುವಾಗಲೇ ಪ್ರಚಾರಕ್ಕೆ ಸೋಗು ಹಾಕುತ್ತ ಇರುವಂಥವರು 'ರೆಪರ್ಟರಿ'ಯ ಮೂಲ ಅಂಶಗಳನ್ನಾದರೂ ಗಮನಿಸಿಕೊಂಡು ರಂಗಕ್ಕಿಳಿದರೆ ; ರಾಮಕೃಷ್ಣ ಹೆಗಡೆ ಸರ್ಕಾರದ ಮಂತ್ರಿಗಳ ಅಥವಾ ಚುನಾವಣಾ ಪ್ರಣಾಳಿಕೆಯ ಮಾತುಗಳಿಗಿನ್ನ ಭಿನ್ನವಾಗುಳಿಸಲು ಸಾಧ್ಯ ಎಂದೆನಿಸುತ್ತದೆ. ರಂಗಭೂಮಿಯುವರಂತೂ

ಜಡವಾಗೇ ಉಳಿದರೆ ಒಳ್ಳೆಯ ನಟ-ನಟಿಯರನ್ನು ಹೊಂದಿದ (ರಘುನಂದನ, ರಾಜವರ್ಧನ, ಪಟೇಲ್, ಸಾವಿತ್ರಿಗಾಂವಿ, ಪ್ರಸನ್ನ ಸುಂದರ್ ಮುಂ.,) ಹೊಂದಿರುವುದೇ, (ವಿರೋಧ ಪಕ್ಷದ ಬಂಗಾರಪ್ಪ, ಗೌಡ್ರು, ಪಾಟೀಲ, ಪ್ರವೀಣ ಇತ್ಯಾದಿಗಳನ್ನು ಸೇರಿಸಿಕೊಂಡು) ಒಂದು ' ವಿನೂತನವಾದ ರೆಪರ್ಟರಿ 'ಯನ್ನು ಬೆಳೆಸಬಹುದೇನೋ !

—ಆರ್. ಜಿ. ಹಳ್ಳಿ ನಾಗರಾಜ್

—ಶೈಲೇಂದ್ರ, ಬಂದಗದ್ದೆ

---

ಭೂಪಾಲ ರಂಗಮಂಡಲದ ಆರು ಹಿಂದಿ ನಾಟಕಗಳು :

೧. ' ಬಗರೋ ಬಸಂತ್ ಥೈ ' (ನಿ : ಫ್ರಿಜ್ ಬೆನ್‌ವಿಟ್ಜ್)
೨. ' ಹಯವದನ ' (ನಿ : ಬಿ. ವಿ. ಕಾರಂತ)
೩. ' ಘಾಸೀರಾಮ ಕೊತ್ವಾಲ್ ' (ನಿ : ಬಿ. ವಿ. ಕಾರಂತ)
೪. ' ದೋ ಕಶ್ತಿಯೋಂಕಾ ಸವಾರ್ ' (ನಿ : ಬ್ಯಾರಿಜಾನ್)
೫. ' ಮಹಾನಿರ್ವಾಣ ' (ನಿ : ಅಲೆಕ್‌ಸಂದರ್)
೬. ' ಇನ್‌ಸಾಫ್ ಕಾ ಘೇರಾ ' (ನಿ : ಬಿ. ವಿ. ಕಾರಂತ)

---

(ಕೇರಳ ಶಾಸ್ತ್ರ ಸಾಹಿತ್ಯದ ಜಾಥ ಮತ್ತು ಬೀದಿ ನಾಟಕಗಳ ಬಗೆಗಿನ ವರದಿ ಮುಂದಿನ ಸಂಚಿಕೆಯಲ್ಲಿ ಪ್ರಕಟವಾಗಲಿದೆ. —ಸಂ.)

## ಸಮುದಾಯದ ಮಧ್ಯೆ ' ತಾಯಿ '

ಆಯಸ್ಕಾಂತದ ಪ್ರಭಾವದಿಂದ ಅದರತ್ತ ಆಕರ್ಷಿತವಾಗಿ ಅದೇ ಪ್ರಭಾವಗಳನ್ನೇ ಹೀರಿಕೊಂಡು ಗಟ್ಟಿಯಾಗ ಮತ್ತೊಂದು ವಸ್ತುವಿಗೆ ತಾನೇ ಆಯಸ್ಕಾಂತವಾಗುವ ಗುಂಡುಸೂಜಿ, ತನ್ನ ಸುತ್ತಲ ಪ್ರಭಾವದಿಂದ ಗಟ್ಟಿಯಾಗಿ ಬೆಳೆಯುವ ಬಗೆಯಂತೆ ' ತಾಯಿ ' ಕೂಡ ಬೆಳೆಯುತ್ತಾ ಹೋಗುವ ಬಗೆಯನ್ನು ಬ್ರೆಕ್ಟ್‌ನ (ಅನು : ಸಿ. ವೀರಣ್ಣ, ನಿರ್ದೇಶನ : ಪ್ರಸನ್ನ) ' ತಾಯಿ ' ನಾಟಕ ಬಿಂಬಿಸುತ್ತದೆ.

ಚಲನಶೀಲ ಸಮಾಜದಲ್ಲಿ ಸಂಘಟನೆಗಳ ಮಧ್ಯೆ ತೊಡಗಿಸಿಕೊಂಡ ತಾಯಿ ಗಟ್ಟಿಗೊಳ್ಳುತ್ತಾ ಹೋಗುವ ಬಗೆ ಸಂಘಟನೆಯ ಶಕ್ತಿಯನ್ನು ತೋರಿಸುತ್ತಾ ವ್ಯಕ್ತಿ ಮತ್ತು ಸಂಘಟನೆಗಳ ಅಂತರವನ್ನು ಸಾರುತ್ತದೆ. ವ್ಯಕ್ತಿ, ಸಂಘಟನೆಯಿಂದ ದೂರ ನಿಂತಾಗ ಪೇಲವವಾದವನು ಸಂಘಟನೆಯ ಮಧ್ಯದಲ್ಲಿ ತನ್ನನ್ನು ತೊಡಗಿಸಿಕೊಂಡಾಗ ಬೆಳೆಯುವ ಬಗೆ, ಸಮುದಾಯದ ಮಧ್ಯದೇ ಆತನ ಹೆಜ್ಜೆ ಮಹತ್ವವಾಗುತ್ತದೆ.

ಮೂಲತಃ ತಾಯಿ ವ್ಯಕ್ತಿ ಮತ್ತು ಸಂಘಟನೆಗಳ ಅಂತರವನ್ನು ಗುರುತಿಸುವ ನಾಟಕ. ಅತ್ಯಂತ ಪ್ರಭಾವಯುತವಾದ ಜನಸಮುದಾಯದಲ್ಲಿ ಅನಕ್ಷರಸ್ಥ ಮುಗ್ಧ ತಾಯಿ ಕೇವಲ ತನ್ನ ಮಗನನ್ನು ಉಳಿಸಿಕೊಳ್ಳುವುದಕ್ಕಾಗಿ 'ಚಳುವಳಿ ಹೂಡಿರಿ' ಎಂಬ ಕರಪತ್ರಗಳನ್ನು ಹಂಚುವುದರೊಂದಿಗೆ ಪ್ರಾರಂಭವಾಗುವ ನಾಟಕ, ತಾಯಿ ತನ್ನನ್ನು ಎಲ್ಲಾ ವಿರೋಧ, ಘರ್ಷಣೆಗೆ ಒಡ್ಡಿಕೊಳ್ಳುತ್ತಾ ಕೊನೆಗೆ ಕ್ರಾಂತಿ ಬಾವುಟವನ್ನು ಮುನ್ನಡೆಸುವವರೆಗೂ ಬೆಳೆಯುತ್ತಾ ಹೋಗುತ್ತಾಳೆ.

ತಾಯಿ, ಮಗನ ಕೆಲವು ನಿಮಿಷಗಳ ಭೇಟಿ, ಬಂಧೀಖಾನೆಯಲ್ಲಿ ತಾಯಿ ಮಗನಿಂದ ವಿಳಾಸ ಪಡೆಯುವುದು, ಮನಸ್ಸನ್ನು ತಟ್ಟಿದರೆ; ತಾಯಿಯನ್ನು ಭೇಟಿ ಮಾಡಲು ಬರುವ ವರಾರಣೆಯುರ ದೃಶ್ಯ, ತಾಯಿ ಓದು ಬರಹ ಕಲಿಯುವುದು, ಕಸಾಯಿಯ ದೃಶ್ಯ ಖುಷಿ ನೀಡುತ್ತವೆ.

ತಾಯಿಯಾಗಿ ಜಯಶ್ರೀ ಅಭಿನಯ ಮನಸ್ಸಿನಲ್ಲಿ ಆಳವಾಗಿ ಉಳಿಯುತ್ತದೆ. ತಾಯಿ ಪಾತ್ರವೇ ಕೇಂದ್ರಬಿಂದುವಾಗಿ ಉಳಿದ ಪಾತ್ರಗಳು ತಾಯಿಯ ಬೆಳವಣಿಗೆ ಸಹಾಯ ಮಾಡುವ ಪೇಲವ ಪಾತ್ರಗಳಾದರೂ, ಇವಾನ್ (ಶ್ರೀನಿವಾಸಮೂರ್ತಿ) ಆಂತೋನ್ (ರಮೇಶ್ ಪಂಡಿತ್) ಪೋಲೀಸ್ ಕಮಿಷನರ್ (ಮೋಹನ್ ಕುಮಾರ್) ಕಸಾಯಿ (ಸತ್ಯನಾರಾಯಣಭಟ್) ನಿಕೋಲಾಯ್ (ಎಂ. ಸಿ. ಆನಂದ್) ಜೈಲು ಕಾವಲು ಗಾರನಾಗಿ ಗುಂಡಣ್ಣ ಗಮನ ಸೆಳೆಯುತ್ತಾರೆ. ನಾಟಕದ ಓಟಕ್ಕೆ ರಂಗಸಜ್ಜಿಕೆ ಹಲವು ಹಂತದಲ್ಲಿ ಅಡ್ಡಿ ತಂದರೂ ಫ್ಯಾಕ್ಟರಿಯ ಒಳ ಮತ್ತು ಹೊರಾಂಗಣವನ್ನು ಸೂಚಿಸುವಲ್ಲಿನ ದೃಶ್ಯಗಳು ಪರಿಣಾಮಕಾರಿಯಾಗಿದ್ದವು.

—'ಜಿಯೆಮ್ಮೆಮ್'

## ಮೈಸೂರಿನಲ್ಲಿ 'ಚಿಕವೀರ ರಾಜೇಂದ್ರ'

ಪ್ರೀತಿಯ ಗೆಳತಿ,

ಅನಿರೀಕ್ಷಿತ ಬೇಟಿಗೆಂದು ಮೈಸೂರಿಗೆ ಬಂದಿದ್ದಾಗ ಮಾಸ್ತಿಯವರ 'ಚಿಕವೀರ ರಾಜೇಂದ್ರ' ನಾಟಕವನ್ನು ಇಲ್ಲಿನ ಜಗನ್ಮೋಹನ ಅರಮನೆ ಸಭಾಂಗಣದಲ್ಲಿ ನೋಡುವ ಅವಕಾಶ ಸಿಕ್ಕಿತು. ತುಂಬಾ ಕುತೂಹಲ, ನಿರೀಕ್ಷೆಯಿಟ್ಟುಕೊಂಡು ಹೋದ ಈ ನಾಟಕ ನಿರಾಶೆ ಹುಟ್ಟಿಸಿದೆ. ಕಲಾವಿದರಂತೂ ಹುಡುಗಾಟಿಕೆಗಾಗಿ ನಾಟಕ ಅಭಿನಯಿಸಿದರೆಂಬುದು ಸ್ಪಷ್ಟ. ಯಾರ ಅಭಿನಯವೂ ನೆನಪಲ್ಲಿ ಉಳಿಯಲಿಲ್ಲ. ಇಡೀ ನಾಟಕ ಪೀಸ್-ಪೀಸ್ ಜೋಡಣೆ ಮಾಡಿದಂತಿತ್ತು. ಸ್ಪಷ್ಟ ಚಿತ್ರಣವನ್ನು ಕಟ್ಟಿ

ಕೊಡುವಲ್ಲಿ ನಾಟಕ ನೋಡಿದೆ. ಕರಪತ್ರದಲ್ಲಿ ಕೊಡಗಿನ ವಿಶಿಷ್ಟ (ಜನಪದ?) ನೃತ್ಯ ಉಮ್ಮತ್ತಾಟ್ ಬಗ್ಗೆ ಇತ್ತಾದರೂ; ನಾಟಕದಲ್ಲಿ ಈ ದೃಶ್ಯ ಇಲ್ಲದೆ ಒಬ್ಬ ಕೋಡಂಗಿಯ ಪ್ರವೇಶದಿಂದ ಇಡೀ ನಾಟಕವೇ ಹಾಳಾಯಿತು. ರಂಗಭೂಮಿ ವಲಯದ (ಮೈಸೂರಿನ ಕೆಲವು ಮಿತ್ರರು) ಮಧ್ಯಂತರದಲ್ಲೇ ಎದ್ದು ಹೋದದ್ದು ಒಂದು ವಿಶೇಷ! ಕಪ್ಪಣ್ಣ (ಶ್ರೀನಿವಾಸ್) ಸಾಹಸ ಮಾಡಿ ಈ ಬೃಹತ್ ಕಾದಂಬರಿಯನ್ನು ನಾಟಕಕ್ಕೆ ಅಳವಡಿಸಿ ನೋಡಿದ್ದಾರೆಂದು ಹೇಳಬಲ್ಲೆ. ರಾಜಧಾನಿ ಪ್ರಯೋಗ ಹೇಗಾಯಿತೋ ಗೊತ್ತಿಲ್ಲ. ಬೆಂಗಳೂರಿಗೆ ಬಂದಾಗ (ಮತ್ತೊಮ್ಮೆ ಈ ನಾಟಕ ಪ್ರದರ್ಶನವಾದರೆ....) ಜೊತೆಯಲ್ಲಿ ನಾಟಕ ನೋಡಿ ಚರ್ಚಿಸೋಣ. ಮತ್ತೆ ಹೆಚ್ಚು ವಿಚಾರ.

ಕ್ಯಾಂಪ್ : ಮೈಸೂರು – ೯ ಇತಿ ನಿನ್ನ ಗೆಳೆಯ,

ದಿ. ೧೪ – ೫ – ೧೯೮೫ —ಆರ್. ಜಿ. ನಾಗರಾಜ್

## ಧಾರವಾಡದಲ್ಲಿ ರಂಗೇರಿದ 'ರಂಗಭೂಮಿಕಾ'

**ಪ್ರಸ್ತಾಪ :**

ನಾಟಕ ಅನಕ್ಷರಸ್ಥನನ್ನೂ ಜ್ಞಾನಿಯನ್ನಾಗಿಸಬಹುದಾದ ಪ್ರಭಾವಿ ಮಾಧ್ಯಮ. ವೇದ ಪುರಾಣದಲ್ಲಿ ಸಹ ನಾಟಕದ ಪಾತ್ರ ಮಹತ್ವಪೂರ್ಣವಾಗಿತ್ತು. ಇತ್ತೀಚಿನ ದಿನಗಳಲ್ಲಿ ಚಲನ ಚಿತ್ರಗಳ ಪ್ರಭಾವದಿಂದ 'ನಾಟಕ' ತನ್ನ ರೂಪವನ್ನೇ ಕಳೆದುಕೊಳ್ಳುತ್ತಿದೆ. 'ನಾಟಕದ' ಈ ಅವನತಿಯ ಭೀಕರ ದುರ್ದಿನಗಳಲ್ಲಿ ನಾಟಕ ಪ್ರೇಮಿಗಳು ಅಸಮಾಧಾನದ ಛಾಯೆಯಲ್ಲಿ ಇದ್ದಾರೆಂದು ಹೇಳಬಹುದು. ಕನ್ನಡದಲ್ಲಿ ಇಂದು ಶ್ರೇಷ್ಠ ನಾಟಕಗಳು ಬರುತ್ತಿದ್ದರೂ, ಕನ್ನಡ ನಾಟಕದ ಅರ್ಥಪೂರ್ಣವಾದ ವಿಶಿಷ್ಟ ಪರಂಪರೆಯೊಂದು ಹುಟ್ಟಿಕೊಂಡಿಲ್ಲದಿರುವುದು ವಿಷಾದನೀಯ.

ಆದರೂ ಇತ್ತೀಚಿನ ವರ್ಷಗಳಲ್ಲಿ ಕನ್ನಡ ನಾಟಕ ಸಾಧನೆ ಗಮನಾರ್ಹವಾಗಿದೆ. ನಾಟಕಗಳ ವಸ್ತು ತಂತ್ರಗಳಲ್ಲಿ, ರಂಗ ಪ್ರಯೋಗದ ತಂತ್ರದಲ್ಲಿ ಹೊಸ ಹೊಸ ವಿಚಾರ ಹುಟ್ಟಿಕೊಳ್ಳುತ್ತಿದೆ. ನಾಟಕದ ಆಂತರಿಕ ಸ್ವರೂಪ ಮತ್ತು ಉದ್ದೇಶಗಳ ವಿಶ್ಲೇಷಣೆಯು ಕಥಾ ವಸ್ತುವಿನ ಒಂದು ಭಾಗವಾಗಿದ್ದರೂ ಅದು ನಾಟಕ ಪ್ರಿಯರಿಗೆ ಕುಚಿಸಲಾರದ ತುತ್ತೂ ಆಗಿದೆ. ನಾಟಕ ಎಷ್ಟೇ ರಸವತ್ತಾಗಿರಲಿ, ಅದು ಎಷ್ಟೇ ರಂಜನೀಯವಾಗಿರಲಿ ಅಥವಾ ನೀತಿಬೋಧವಾಗಿರಲಿ ಅದು ಹೆಚ್ಚಾಗಿ ಸಾಂಪ್ರದಾಯಿಕ ಚೌಕಟ್ಟಿಗೆ ಸೇರುವಂತಾಗಿದೆ.

ಇತ್ತೀಚಿಗಿನ ನಾಟಕಗಳನ್ನು ನಮ್ಮ ವೃತ್ತಿ ರಂಗಭೂಮಿಯ ನಾಟಕಗಳ ಸುಧಾರಿತ ಆವೃತ್ತಿ ಎಂದು ವರ್ಣಿಸಬಹುದು. ನಾಟಕದ ಅವನತಿಯು ಕೊನೆಯಂಚಿನ ದಿನಗಳಲ್ಲಿ

ಇನ್ನೂ ಅಲ್ಲಲ್ಲಿ ನಾಟಕದ ತಳಕು ಬೆಳಕು ಕಾಣಿಸಿಕೊಳ್ಳುತ್ತಿದ್ದರೆ ಸಾಂಪ್ರದಾಯಿಕ ಮೌಲ್ಯ ವ್ಯವಸ್ಥೆಗಳೇ ಕಾರಣವಾಗಿವೆ ಅನಿಸುತ್ತದೆ.

ಪ್ರೇಕ್ಷಕರು ರಂಗ ಕ್ರಿಯೆಯೊಂದಿಗೆ ತಲ್ಲೀನರಾದಂತೆ ತಡೆಯುವ ಜೀವನ ಬೇರೆ-ನಾಟಕದ ಅನುಭವ ಬೇರೆ ಎಂದು ಎಚ್ಚರಿಸುವ ವಿಧಾನಗಳೇ ಇತ್ತೀಚೆಗೆ ಹೆಚ್ಚಾಗಿವೆ. ನಾಟಕದಲ್ಲಿ ಹಾಡು – ಕುಣಿತಗಳನ್ನು ಸೇರಿಸುವುದಷ್ಟೇ ಅಪೂರ್ಣ ರಂಗಭೂಮಿಯ ಲಕ್ಷಣವಾಗಲಾರದು. ಇಂಥ ನಾಟಕಗಳು ಅರ್ಥವಾಗುವುದಿಲ್ಲ ಎಂಬ ಕಾರಣಕ್ಕಾಗಿ ಕೆಲವರು ಇಡೀ ನಾಟಕಗಳನ್ನೇ ಧೂಷಿಸುತ್ತಿದ್ದಾರೆ.

ಇತ್ತೀಚೆಗೆ ಬೆಳೆದುಬಂದ ಹವ್ಯಾಸಿ ನಾಟಕ ತಂಡಗಳು ತಮ್ಮದೇ ಆದ ವಿಶಿಷ್ಟ ಪರಂಪರೆ ರೂಪಿಸಿಕೊಂಡಿವೆ. ಅಭಿನಯ, ಶೋಷಣೆಯನ್ನೊಳಗೊಂಡ ಕತೆ, ವರ್ಗ ಕಲಹ, ಜಾತಿ ಪದ್ಧತಿ, ರಾಜಕೀಯ ಭ್ರಷ್ಟಾಚಾರ ಮುಂತಾದ ವಸ್ತುಗಳನ್ನು ಚಿತ್ರಿಸುವ ನಾಟಕಗಳನ್ನು ಹೆಚ್ಚು ಖರ್ಚಿಲ್ಲದೆ ರಂಗಭೂಮಿಯ ಮೇಲೆ ಒಂದು ದೃಶ್ಯದಲ್ಲಿ ಜನಸಾಮಾನ್ಯರಿಗೆ ತಿಳಿಯುವ ಮಾಧ್ಯಮದಲ್ಲಿ ಅಭಿನಯಿಸುತ್ತಿರುವುದು ಮೆಚ್ಚಬೇಕಾದ ಅಂಶ.

ಭೌತಿಕ ಜೀವನದ ರುಚಿಯನ್ನೇ ಸವಿದು, ಅದರಲ್ಲಿಯೇ ತೃಪ್ತಿಪಟ್ಟು ಅದೇ ಹಾದಿಯಲ್ಲಿರುವ ಅನೇಕ ಜನ ನಾಟಕದ ಅರ್ಥಪೂರ್ಣವಾದ ಒಳ ಅರ್ಥವನ್ನೇ ಅರಿತಂತಿಲ್ಲ. ಚಲನಚಿತ್ರ ಮಾಧ್ಯಮದಿಂದ ನಮ್ಮ ಸಂಸ್ಕೃತಿಯ, ಪರಂಪರೆಯ ಅವನತಿಯನ್ನು ಎದುರಿಸುತ್ತಿರುವ ದಿನಗಳಲ್ಲಿ ನಾಟಕವೂ ಒಂದು ಮುಳುಗಡೆಯ ಹಂತದಲ್ಲಿರುವ ಹಡಗಿನಂತೆ ಆಗುತ್ತಿದೆಯೇನೋ ಎಂಬ ಭೀತಿ ನಮ್ಮನ್ನು ಕಾಡುತ್ತಿದೆ.

'ರಂಗಭೂಮಿಕಾ'ದ ಹುಟ್ಟು ಮತ್ತು ನಾಟಕೋತ್ಸವ: ನಾಟಕದ ಅವನತಿಯ ಇಂಥ ಸಂದರ್ಭದಲ್ಲಿ ನಾಟಕದ ಪುನರುದ್ಧಾರಕ್ಕೆ ಮತ್ತು ಅದರ ಚಟುವಟಿಕೆಗಳನ್ನು ಇನ್ನಷ್ಟು ಕ್ರಿಯಾತ್ಮಕಗೊಳಿಸುವ ಉದ್ದೇಶವನ್ನಿಟ್ಟುಕೊಂಡು ಧಾರವಾಡದಲ್ಲಿ ಇತ್ತೀಚೆಗೆ 'ರಂಗಭೂಮಿಕಾ' ಜನ್ಮತಾಳಿದೆ. ಈ ರಂಗಭೂಮಿಕಾಕ್ಕೆ ರಂಗೇರಿದ್ದು ಈ ಸಂಸ್ಥೆ ಸಂಘಟಿಸಿದ ನಾಟಕೋತ್ಸವದಂದು. ಬೆಂಗಳೂರಿನ 'ಜನ ನಾಟ್ಯ ಮಂಡಳಿ', ಹುಬ್ಬಳ್ಳಿಯ 'ರಂಗರಂಜನಿ' ಈ ನಾಟಕೋತ್ಸವದಲ್ಲಿ ಭಾಗ ವಹಿಸಿದ್ದವು.

ದಿ. ೧೪–೪–೮೫ ರಂದು ಕಲಾಭವನದಲ್ಲಿ ಸಂಜೆ ೬–೩೦ ಕ್ಕೆ 'ಮಾಡು ಸಿಕ್ಕದಲ್ಲ' (ಮೂಲ: ವಿಜಯ ತೆಂಡೂಲ್ಕರ್, ಅನು: ಹೇಮಾ) ನಾಟಕ ಬೆಂಗಳೂರಿನ ಜನ ನಾಟ್ಯ ಮಂಡಳಿಯಿಂದ ಅಭಿನಯಿಸಲ್ಪಟ್ಟಿತು. ಉದ್ಯೋಗಕ್ಕಾಗಿ ಅಲೆಯುವ ಪದವೀಧರನ ಸುತ್ತಲೂ ಹೆಣೆದ ಪ್ರಸ್ತುತ ಪರಿಸ್ಥಿತಿಯನ್ನು ಒಳಗೊಂಡ ಈ ನಾಟಕದ

ನಿರ್ದೇಶಕ ಆರ್. ನಾಗೇಶ್. ಉತ್ತಮ ಅಭಿನಯ ಮತ್ತು ನೆರಳು-ಬೆಳಕು ಸಂಯೋಜನೆಯಿಂದ ನಾಟಕ ಪ್ರೇಕ್ಷಕರನ್ನು ಎರಡು ಗಂಟೆಗಳ ಕಾಲ ಹಿಡಿದಿಟ್ಟಿತು.

ಅಂದೇ ರಾತ್ರಿ ಕುಂ. ವೀರಭದ್ರಪ್ಪ ಅವರ 'ಬೇಲಿ ಮತ್ತು ಹೊಲ' (ರೂಪಾಂತರ-ನಿರ್ದೇಶನ: ಜಿ. ಎಚ್. ರಾಘವೇಂದ್ರ) ಅಭಿನಯಿಸಲ್ಪಟ್ಟಿತು. ಹಳ್ಳಿಯ ಮುಗ್ಧ ವಾತಾವರಣದ ಕುಟುಂಬವೊಂದರಲ್ಲಿ ನಡೆದ ಅನಿರೀಕ್ಷಿತ ಕಳುವಿನ ಘಟನೆ ಅವರನ್ನು ಪೋಲೀಸರ ಹತ್ತಿರ ಹೋಗುವಂತೆ ಮಾಡುತ್ತದೆ. ಪೋಲೀಸರ ದೌರ್ಜನ್ಯಕ್ಕೆ ಸಿಲುಕಿದ ಇಡೀ ಕುಟುಂಬ ಸರ್ವನಾಶವಾಗುವ ಹಂತಕ್ಕೆ ಹೋಗುತ್ತದೆ. ಪೋಲೀಸರ ದೌರ್ಜನ್ಯದ ದೃಶ್ಯಗಳು ತುಂಬಾ ನೈಜವಾಗಿ, ಪರಿಣಾಮಕಾರಿ ಮೂಡಿಬಂದವು.

ದಿ ೧೫-೪-೮೫ ರಂದು ಬೆಂಗಳೂರಿನ ಜನನಾಟ್ಯ ಮಂಡಳಿ ಅಭಿನಯಿಸಿದ 'ಸೂರ್ಯ ಶಿಕಾರಿ' (ಮೂಲ: ಉತ್ಪಲ್‌ದತ್, ಅನು: ಎಂ. ಪಿ. ಪ್ರಕಾಶ್) ಎಲ್. ಕೃಷ್ಣಪ್ಪ ಅವರ ನಿರ್ದೇಶದಲ್ಲಿ ನೆನಪಲ್ಲಿ ಉಳಿಯುವ ಅಭಿನಯ ಕೊಟ್ಟಿತು. ನಂಬಿಕೆ ಮತ್ತು ವಿಚಾರಗಳ ಸಂಘರ್ಷದ ವಸ್ತುವಿನ ಈ ನಾಟಕ ಪ್ರೇಕ್ಷಕರಿಗೆ ವಿಚಾರವಾದದ ತಿರುಳನ್ನು ನೀಡಿದೆ. ಭೂಮಿ ಚಪ್ಪಟೆಯಾಗಿದೆಯೆಂದು ನಂಬಿದ್ದ ಕಾಲದಲ್ಲಿ (ಗುಪ್ತರ ಕಾಲ) 'ಭೂಮಿ ಗುಂಡಾಗಿದೆ' ಎಂದು ಸಾರಿದ ಕಲ್ಹಣ (ಹಲವು ಸಿದ್ಧಾಂತಗಳ ಮೂಲಕ) ಪಾತ್ರದಲ್ಲಿ ನೆನಪಲ್ಲಿ ಉಳಿಯುತ್ತಾನೆ. ಗುಪ್ತರ ಕಾಲದ ಘಟನೆಯನ್ನು ಪ್ರಸ್ತುತ ವಿಜ್ಞಾನದ ನಂಬಿಕೆಗಳಿಗೆ ಹೋಲಿಸಿದ ಈ ನಾಟಕ ಪ್ರಭಾವಶಾಲಿಯಾಗಿತ್ತು.

ದಿ. ೧೬-೪-೮೫ ರಂದು ಧಾರವಾಡದ ರಂಗಭೂಮಿಕಾ ತಂಡ ಅಭಿನಯಿಸಿದ 'ಅದೇ ಅಧೂರೆ' (ಮೂಲ: ಮೋಹನ ರಾಕೇಶ್, ಅನು: ಸಿದ್ಧಲಿಂಗ ಪಟ್ಟಣಶೆಟ್ಟಿ) ನಾಟಕವನ್ನು ಶ್ರೀ ಚಟರ್ಜಿಯವರು ನಿರ್ದೇಶಿಸಿದರು. ಆಧುನಿಕ ಸಮಾಜದಲ್ಲಿ ಮಧ್ಯಮ ವರ್ಗದ ನಗರ ಜೀವನದ ವ್ಯಕ್ತಿಗಳ, ಸ್ತ್ರೀ-ಪುರುಷರ ನೈತಿಕ ಸಂಬಂಧದ ತಾಕಲಾಟ, ಆರ್ಥಿಕ ಅವನತಿ ಇತ್ಯಾದಿಯಿಂದಾಗಿ ಅನಿವಾರ್ಯವಾಗಿ ಬಂದ ದುರಂತ ಜೀವನದ ಚಿತ್ರಣ ಈ ನಾಟಕದ ವಸ್ತು.

ಅಂದೇ ರಾತ್ರಿ ೧೦ ಗಂಟೆಗೆ 'ಒಥೆಲೋ' ನಾಟಕವನ್ನು (ಮೂಲ: ಷೇಕ್ಸ್‌ಪಿಯರ್, ಅನು: ನಿಸಾರ್ ಅಹಮದ್) ಬೆಂಗಳೂರಿನ ಜನನಾಟ್ಯ ಮಂಡಳಿ ಅಭಿನಯಿಸಿತು. ಮಾನು ಒಥೆಲೋ ಆಗಿ ಒಳ್ಳೆಯ ಅಭಿನಯ ನೀಡಿದರು. 'ಪ್ರೀತಿಗೆ ಅನುಮಾನ ಹೆಚ್ಚು' 'ಪ್ರೇಮಕ್ಕೆ ರೂಪ ಮುಖ್ಯವಲ್ಲ' ಎಂಬುದು ಈ ನಾಟಕದ ನೀತಿ. ಆರ್. ನಾಗೇಶ್ ಈ ನಾಟಕದ ನಿರ್ದೇಶಕರು.

ಈ ಮೂರು ದಿನಗಳ ಐದು ನಾಟಕಗಳು ಧಾರವಾಡದ ನಾಟಕ ಪ್ರೇಮಿಗಳನ್ನು ರಂಜಿಸುವುದರ ಮೂಲಕ ರಂಗಭೂಮಿಕಾಕ್ಕೆ ಹೊಸ ಚೈತನ್ಯ ಕೊಟ್ಟಂತೆ ಆಗಿದೆ. ರಂಗಭೂಮಿಕಾದ ಸಂಚಾಲಕತ್ವ ಶ್ರೀಮತಿ ಹೇಮಾ ಅವರದು.

ಧಾರವಾಡ – ೭. —ಜೆ. ಬಿ. ಸುದರ್ಶನ

## ಈ ಸಂಚಿಕೆಯ ಲೇಖಕರು

● ಡಾ|| ಎಂ. ಚಿದಾನಂದಮೂರ್ತಿ, ಕನ್ನಡ ಅಧ್ಯಯನ ಕೇಂದ್ರ, ಜ್ಞಾನಭಾರತಿ, ಬೆಂಗಳೂರು – 560 056 ● ಸು. ರಂ. ಎಕ್ಕುಂಡಿ, 683, ಮೊದಲನೇ 'ಇ' ಕ್ರಾಸ್, 3ನೇ ಸ್ಟೇಜ್, 4ನೇ ಬ್ಲಾಕ್, ವೆಸ್ಟ್ ಆಫ್ ಕಾರ್ಡ್ ರೋಡ್, ಬೆಂಗಳೂರು – 79. ● ಪ್ರೊ|| ಸಂಜೀವ ದೇಶಪಾಂಡೆ, ವಿದ್ಯುತ್ ವಿಭಾಗ, ಸರ್ಕಾರಿ ಪಾಲಿಟೆಕ್ನಿಕ್, ಬೀದರ್ – 585401 ● ಜಿ. ಎನ್. ಮೋಹನ್, 142, 'ಮನೆ' 69ನೇ ಕ್ರಾಸ್, 5ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು – 10. ● ಎಚ್. ಪಿ. ಸೋಮಶೇಖರ್, ಶೀಘ್ರಲಿಪಿಕಾರರು, ಕೃಷಿ ಪ್ರಧಾನಾಧಿಕಾರಿಗಳ ಕಛೇರಿ, ಶಹಾಪುರ, ಬೆಳಗಾಂ. ● ಅಬ್ದುಲ್ ರಶೀದ್, ಬಿ.ಎ., ವಿದ್ಯಾರ್ಥಿ, ಮುಸ್ಲಿಂ ಹಾಸ್ಟಲ್, ಸರಸ್ವತಿಪುರಂ, ಮೈಸೂರು – 570 009 ● ಸುಧೇಶ ಮಹಾನ್, ಚಿತ್ರ ಕಲಾವಿದ, ಅಜಂತಾ ಕಲಾವಿದರು, ಮಂಗಳೂರು. ● ಮಮತಾ ಜಿ. ಸಾಗರ್, ನಂ. 3, ದೇವನಾಥಚಾರ್ ರಸ್ತೆ, ಚಾಮರಾಜಪೇಟೆ, ಬೆಂ. – 18. ● ಸರಸ್ವತಿಗೌಡ, ಮತ್ತಿಕೆರೆ, ಶೆಟ್ಟಿಹಳ್ಳಿ ಅಂಚೆ, ಚನ್ನಪಟ್ಟಣ ತಾಲ್ಲೂಕ್. ● ಎಸ್. ಕೆ. ವಾಣಿ, ಚೆನ್ನಪ್ಪ ಲೇ ಔಟ್, ಶಿವಮೊಗ್ಗ – 577 201. ● ತಿಮ್ಮನಹಳ್ಳಿ ವೇಣುಗೋಪಾಲ್, ಇತಿಹಾಸ ಉಪನ್ಯಾಸಕ, ಜ್ಯೂ. ಕಾಲೇಜ್ ಮಂಗಸುಳಿ, ಅಥಣಿ ತಾಲ್ಲೂಕ್. ● ಕೆ. ರಾಮಯ್ಯ, ಮಹದೇಶ್ವರ ನಿಲಯ, ಎ.ಕೆ. ಕಾಲೋನಿ, ಹೊಸಹಳ್ಳಿ, ವಿಜಯನಗರ, ಬೆಂಗಳೂರು – 40. ● ಮನಜ (ಮ. ನ. ಜವರಯ್ಯ), ಭಾರತೀಯ ಭಾಷಾ ಸಂಸ್ಥಾನ, ಮಾನಸ ಗಂಗೋತ್ರಿ, ಮೈಸೂರು – 570 006. ● ಆರ್. ಜಿ. ಹಳ್ಳಿ ನಾಗರಾಜ್, ಕನ್ನಡ ವಿಭಾಗ, ಕಲ್ಬುರ್ಗಿ ವಿದ್ಯಾ ಸಂಸ್ಥೆ, ಅಕ್ಕಿಪೇಟೆ ಮುಖ್ಯರಸ್ತೆ, ಬೆಂಗಳೂರು – 560 053. ● ಶೈಲೇಂದ್ರ ಬಂದಗದ್ದೆ, ಬಂದಗದ್ದೆ, ಕೆಳದಿ ಅಂಚೆ, ಸಾಗರ ತಾಲ್ಲೂಕ್, ಶಿವಮೊಗ್ಗ ಜಿಲ್ಲೆ. ● ಜೆ. ಬಿ. ಸುದರ್ಶನ, c/o. ಎಸ್. ಪಿ. ಹಿರೇಮಠ್, ಶಿರ ಹಟ್ಟಿಕರ ಕಾಂಪೌಂಡ್, ಮಾಳಮಡ್ಡಿ, ಧಾರವಾಡ – 7. ● ಕೆ. ವಿ. ಸುಬ್ರಮಣ್ಯ, 40/3, 1ನೇ ಮುಖ್ಯ ರಸ್ತೆ, 10ನೇ ಅಡ್ಡರಸ್ತೆ, ಬಾಪೂಜಿನಗರ, ಬೆಂಗಳೂರು–26.

---

ಪ್ರಿಯ ಓದುಗ,

ಪತ್ರಿಕೆ ತಡವಾಗಿ ಕೊಡುತ್ತಿರುವುದಕ್ಕೆ ವಿಷಾದಿಸುತ್ತೇನೆ. ಮುದ್ರಣಾಲಯದಲ್ಲಾದ ವಿಳಂಬಗತಿಯೇ ಇದಕ್ಕೆ ಕಾರಣ. ತಡವಾದರೂ 'ಅನ್ವೇಷಣೆ' ಪ್ರಕಟವಾಗುತ್ತದೆ. ಪ್ರೀತಿಯಿಂದ ಬರಮಾಡಿಕೊಳ್ಳಿ. ಚಂದಾ ಬಾಕಿ ಉಳಿಸಿಕೊಂಡವರು ಕೂಡಲೇ ಕಳುಹಿಸಿಕೊಡಿ.

— ಸಂಪಾದಕ

ವಾರ್ಷಿಕ ಚಂದಾ : ರೂ. 20/- ಆಜೀವ : ರೂ. 250/- (ಎರಡು ಕಂತುಗಳಲ್ಲಿ)

---

ANVESHANE March - April 1985

MAG (5) PRB-DECL-73/84-85



---

Edited & Printed by R. G. Halli Nagaraj, Published by Aruna Yuva Lekhakara Balaga, 37/2A, 'Nisarga' Nagarabavi Road, Vijayanagar North, Bangalore-79. at Chetana Printers, L. N. Puram, Bangalore - 560 021